ಗೌಡಕುಲ ವಿಭೂಷಣ

# ಕೆಂಪೇಗೌಡನ ಜಯಪ್ರಶಸ್ತಿ

ಕವಿ: ಸದ್ಗುರು ನಂಜೇಶ್ವರ

ಸಂಪಾದಕ:

ಕರ್ಲಮಂಗಲಂ ಶ್ರೀಕಂಠಯ್ಯ

ಗೌಡಕುಲ ವಿಭೂಷಣ

# ಕೆಂಪೇಗೌಡನ ಜಯಪ್ರಶಸ್ತಿ

ಕವಿ: ಸದ್ಗುರು ನಂಜೇಶ್ವರ

ಸಂಪಾದಕ :

ಕರ್ಲಮಂಗಲಂ ಶ್ರೀಕಂಠಯ್ಯ

ಪೋಸ್ಟ್ - ಮಾಗಡಿ - ಬೆಂಗಳೂರು ಜಿಲ್ಲೆ

ಬೆಲೆ: ಎರಡು ರೂಪಾಯಿ.

ಮೊದಲನೆಯ ಮುದ್ರಣ

ಶಕ, ಫಾಲ್ಗುಣ ೧೮೮೨ ಕ್ರಿ. ಶ. ಮಾರ್ಚಿ ೧೯೬೧

ಎಲ್ಲ ಹಕ್ಕುಗಳೂ ಸಂಪಾದಕರದು.

ಮಾರಾಟಗಾರರು :

**ಜಿ. ಎಸ್. ವಿಶ್ವ ಮತ್ತು ಕಂಪೆನಿ**

ಕೃಷ್ಣಾ ಬಿಲ್ಡಿಂಗ್ಸ್,

**ಅವೆನ್ಯೂ ರೋಡು : : ಬೆಂಗಳೂರು ಸಿಟಿ.**

ಮುದ್ರಕರು :

ಶ್ರೀ ವಿ. ಗೋವಿಂದಪ್ಪನವರು

**ಶ್ರೀ ಸತ್ಯಾನಂದ ಪ್ರೆಸ್**

ಅರಳೇಪೇಟೆ : : ಬೆಂಗಳೂರು-೨

ಪ್ರಕಾಶಕರು :

**ಕರ್ಲಮಂಗಲಂ ಶಂಕರಪ್ಪ (ಕೃಷಿಕ)**

ಪೋಸ್ಟ್ ಮಾಗಡಿ – ಬೆಂಗಳೂರು ಜಿಲ್ಲೆ.

ಬೆಂಗಳೂರು ವಿಳಾಸ :

**ಕೆ. ವೆಂಕಟಾಚಲಯ್ಯ**

ಪ್ರೊ|| ಎಸ್. ಎಲ್. ವಿ. ಭರ್ವ

ನಂ. ೬, ಚೌಡೇಶ್ವರಿಗುಡಿ ಬೀದಿ, ನಗರ್ತರ ಪೇಟೆ

ಬೆಂಗಳೂರು ಸಿಟಿ. ೨.

# ಸ್ವವಿಷಯ

ಬಾದಾಮಿ ಚಾಲುಕ್ಯರ, ಮೂಲಪುರುಷನು ತ್ರಿಲೋಚನಪಲ್ಲವ ನೊಡನೆ ಆದ ಯುದ್ಧದಲ್ಲಿ ಮಡಿದುಬಿದ್ದಾಗ ಗರ್ಭಿಣಿಯಾಗಿದ್ದ ಆತನ ಹೆಂಡತಿಯನ್ನು "**ಮುಡಿವೇಮು**" ಅಗ್ರಹಾರದ "ವಿಷ್ಣುಭಟ್ಟ"ನು ತನ್ನ ಮಗಳಂತೆ ಸಾಕಿ, ಸಲಹಿ, ಅವಳು ಹೆತ್ತ ಮಗನಿಂದ ಬಾದಾಮಿ ಚಾಲುಕ್ಯ ರಾಜ್ಯವಂಶವನ್ನು ಸ್ಥಾಪಿಸಿದನು.

**ಸ್ವಾಮಿವಿದ್ಯಾರಣ್ಯನು** ಹಾಲುಕೊಟ್ಟ ಋಣ ತೀರಿಸುವುದಕ್ಕಾಗಿ ಹಕ್ಕ-ಬುಕ್ಕರನ್ನು ರಾಜಗದ್ದುಗೆಗೇರಿಸಿ "ವಿಜಯನಗರ ಸಾಮ್ರಾಜ್ಯ" ಸ್ಥಾಪಕ ನಾದನು.

ಬೆಳಮಂಗಲದ "**ನಾರಾಯಣಪ್ಪ**"ನು "**ಇಮ್ಮಡಿ ಕೆಂಪೇಗೌಡ**"ನು ಷಹಜಿ, ರಣದುಲ್ಲಾಖಾನರಿಂದ ರಾಜ್ಯಕಳೆದುಕೊಂಡು ಪರದೇಶಿಯಾಗಿದ್ದಾಗ, ಅವನನ್ನು ತನ್ನ ಆಳಿನಂತೆ ಮುಚ್ಚಿಟ್ಟದ್ದು, ತಿರುಗಿ ಇವನನ್ನು ಉದ್ಧರಿಸಿ "**ಮಾಗಡಿ ರಾಷ್ಟ್ರ**"ದ ರಾಜ್ಯಸ್ಥಾಪಕನಾದನು. ಈ ಕಾರ್ಯದಲ್ಲಿ ನೆರ ವಾದವನು ನಮ್ಮ ಹಿರಿಯನಾದ ಕರಲಮಂಗಲದ "**ಸುಬ್ಬರಾಯಪ್ಪ**"ನು.

ನನ್ನ ತಾಯಿ **ಭ್ರಮರಮ್ಮ** ಬೆಳಮಂಗಲದ ನಾರಣಪ್ಪನ ಮನೆತನ ದಲ್ಲಿ ಹುಟ್ಟಿದವರ ಮಗಳು.

ನನ್ನ ತಂದೆ, **ಸುಬ್ಬಯ್ಯ** ನೇರವಾಗಿ ಸುಬ್ಬರಾಯಪ್ಪನ ವಂಶದಲ್ಲಿ ಹಿರಿಯ ಸಂತತಿಯವನು.

ನಾನು ಈ ಗ್ರಂಥ ಪ್ರಕಟಣೆಯ ಮೂಲಕವಾಗಿ, ನನ್ನ ತಾಯಿ, ತಂದೆ ಎರಡೂ ಕಡೆಯವರ ಕರ್ತವ್ಯವನ್ನು ಮುಂದುವರೆಸಿದ್ದೇನೆ.

—ಸಂಪಾದಕ.

ಜಯಪ್ರಶಸ್ತಿಯ ಕಥಾನಾಯಕ

# ಇಮ್ಮಡಿ ಕೆಂಪೇಗೌಡ



ಬೆಂಗಳೂರು ದಂಡು ಹಲಸೂರು ಸೋಮೇಶ್ವರ ದೇವಾಲಯದಲ್ಲಿರುವ ವಿಗ್ರಹ.

# ಮುನ್ನುಡಿ

## ಕವಿ - ಮತ್ತು - ಕಾಲ

ಈ "**ಕೆಂಪೇಗೌಡನ ಜಯಪ್ರಶಸ್ತಿ**" ಯನ್ನು ರಚಿಸಿದ ಕವಿಯ ಹೆಸರು ಈ ಗ್ರಂಥದಿಂದ ನೇರವಾಗಿ ತಿಳಿಯುವುದಿಲ್ಲ. ಕವಿಯು ಈ ಗ್ರಂಥದ ಮೊದಲನೆಯ ಭಾಗದ ಹಾಡು ೧೯ರಲ್ಲಿ—"**ಹರುಷದಿ ಗುಮ್ಮಳಾಪುರದ ಸದ್ಗುರು ನಂಜೇಶ್ವರನ ಕೃಪೆಯ ಸಮಾಪ್ತಾ**" ಎಂದೂ, ಮತ್ತು ಇದೇ ಪ್ರಶಸ್ತಿಯ ಎರಡನೆಯ ಭಾಗದ ಹಾಡು ೩೭ರಲ್ಲಿ—"

ಧರೆಯೊಳಿಲಹಂಕದ ನಾಡ ವರಶಾಸನೋದ್ಧಾರಾ ।
ವರ "ಕಕೋದ್ಗಿರಿ ಗಂಗೇಶನ" ಭಕ್ತ ಮಂದಾರಾ ॥

ಹರುಷದಲಿ "ಹಲಸೂರ ವಾಸ ಸೋಮೇಶ್ವರನ ।
ಕರುಣದಲಿ ವರ ಬೆಂಗಳೂರಾ ಸ್ಥಳದಲ್ಲಿ ॥

ಮೆರೆವ "ದೊಡ್ಡ ಬಸವೇಶ್ವರನ" ದಯದಿ ।
"ಗುರು ನಂಜೇಶ್ವರರ ಕೃಪೆಯನು ಸಲೆ ಪಡೆದು ॥

ಎಂದೂ ಹೇಳಿಕೊಂಡಿರುವುದರಿಂದ ಈ ಕವಿಯ ಹೆಸರು "**ಗುಮ್ಮಳಾಪುರದ ಗುರುನಂಜೇಶ್ವರ**" ನೆಂದಿದ್ದಿರಬಹುದೆಂದು ತಿಳಿದುಕೊಳ್ಳಬೇಕಾಗಿದೆ. ಈ ಪ್ರಶಸ್ತಿಯ ಕವಿಯು ಗುರುನಂಜೇಶ್ವರನೋ, ಇಲ್ಲವೆ, ಈ ನಂಜೇಶ್ವರನ ಕೃಪಾಪಾತ್ರನಾದ ಇವನ ಒಬ್ಬ ಶಿಷ್ಯನೋ ಏನನ್ನೂ ಹೇಳುವುದಕ್ಕಾಗದೇ ಹೋಗಿದೆ.

ಕವಿಯು "ಗುಮ್ಮಳಾಪುರದ ಸದ್ಗುರು ನಂಜೇಶ್ವರ" ಎಂದು ಹೇಳಿಕೊಂಡಿರುವುದರಿಂದ ಈತನು ಬೆಂಗಳೂರು ಜಿಲ್ಲೆ ಆನೇಕಲ್ಲು ತಾಲ್ಲೂಕಿನ ಅಂಚಿನಲ್ಲಿ ಸೇಲಂ ಜಿಲ್ಲೆ ಹೊಸೂರು ತಾಲ್ಲೂಕಿಗೆ ಸೇರಿರುವ "ಗುಮ್ಮಳಾಪುರ" ದವ ನಿದ್ದಿರಬಹುದೆಂದು ಹೇಳಬಹುದಾಗಿದೆ. ಈ ಗ್ರಂಥದಿಂದ ಇವನ ತಾಯಿ, ತಂದೆ, ಮೊದಲಾದ ಯಾರ ಹೆಸರೂ ತಿಳಿಯುವುದಿಲ್ಲ.

ಕವಿಯು ತನ್ನ ಮತವನ್ನು ತಿಳಿಸುವ ನೇರವಾದ ಯಾವ ಮಾತನ್ನೂ ಬರೆದಿರುವುದಿಲ್ಲ. ಆದರೂ– ಈ ಪ್ರಶಸ್ತಿಯ ಒಂದನೆಯ ಭಾಗದ ಮೊದಲಿನಲ್ಲಿ– "ಸರ್ವಸಿದ್ಧಿಪ್ರದಾಯಕ, ವಿನಾಯಕಾಯ ನಮಃ – ಶ್ರೀ ಶಾರದಾಂಬಾಯ ನಮಃ – ಶ್ರೀ ಗುರುವೇ ನಮಃ" – ಎಂದೂ, ಎರಡನೆಯ ಭಾಗದ ಮೊದಲಿನಲ್ಲಿ – "ಶ್ರೀ ಗಣಾಧಿಪತಯೇ ನಮಃ – ಶ್ರೀ ಶಾರದಾಂಬಾಯ ನಮಃ – ಶ್ರೀ ಗಂಗಾಧರ ಲಿಂಗಾಯ ನಮಃ – ಶುಭಮಸ್ತು" – ಎಂದೂ ಬರೆದಿರುವುದನ್ನು ನೋಡಿದರೆ ಈತನು ಸ್ಮಾರ್ತಬ್ರಾಹ್ಮಣನೆಂದು ಕಾಣುತ್ತದೆ. ಮತ್ತು ಈ ಪ್ರಶಸ್ತಿಯ ಎರಡನೆಯ ಭಾಗದ ಹಾಡು ೩೮ ರಲ್ಲಿ – "**ವಿನುತ ಶೈವಾಗಮ ವಿಚಾರ ತತ್ತ್ವಗಳಿಂದಾ**" – ಎಂದೂ ಹೇಳಿರುವುದನ್ನು ನೋಡಿದರೆ ಈತನು "**ಶಿವದ್ವಿಜ ಬ್ರಾಹ್ಮಣ**" ನಾಗಿದ್ದಿರಲೂ ಬಹುದೆಂದು ಊಹಿಸುವುದಕ್ಕೆ ಕಾರಣವಿದೆ.

ಈ "ಗುರುನಂಜೇಶ್ವರ" ನು ತನ್ನನ್ನು "**ಗುರು–ಸದ್ಗುರು**" ಎಂದು ಹೇಳಿಕೊಂಡಿರುವುದರಿಂದ ಈತನನ್ನು ಆ ಕಾಲದ ಜನರು "**ಗುರು**" ವೆಂದು ಆದರಿಸುತ್ತಿದ್ದರೆಂದು ಕಾಣುವುದು. ಈತನಿಗೂ ಹಲವಾರು ಮಂದಿ ಶಿಷ್ಯಕೋಟಿಯೂ ಇದ್ದಿರಬಹುದು. ಒಂದು ರೀತಿಯಿಂದ ಈತನು ಈ ಜಯಪ್ರಶಸ್ತಿಯ ಕಥಾನಾಯಕನಾದ "**ಇಮ್ಮಡಿ ಕೆಂಪೇಗೌಡ**" ನಿಗೂ ಗುರುವಾಗಿದ್ದರೂ ಇರಬಹುದು. ಈ ಸಂಗತಿಯನ್ನು ವಿವರವಾಗಿ ಬರೆಯುವುದಕ್ಕೆ ಸಾಧನ ಸಂಪತ್ತಿನ ಅಭಾವದಿಂದ ಆಗದೆ ಸುಮ್ಮನಿರಬೇಕಾಗಿದೆ. ಈ ಪ್ರಶಸ್ತಿಯ ಲೇಖಕನು ಇದರಲ್ಲಿ ತಾನು ಗ್ರಂಥರಚನೆ ಮಾಡಿದ ಕಾಲವನ್ನು ತಿಳಿಸಿರುವುದಿಲ್ಲ. ಆದುದರಿಂದ ಈ "ಜಯಪ್ರಶಸ್ತಿ" ಯ ಕಥಾನಾಯಕನಾದ "**ಇಮ್ಮಡಿ ಕೆಂಪೇಗೌಡ**" ನ ಕಾಲವೇ ಕವಿಯ ಕಾಲವಾಗಿರಬೇಕೆಂದು ತಿಳಿದುಕೊಳ್ಳಬೇಕಾಗಿದೆ. ಕವಿಯು ಇಮ್ಮಡಿ ಕೆಂಪೇಗೌಡನು ಇನ್ನೂ ಬದುಕಿದ್ದಾಗಲೇ ಈ "ಹಾಡುಗಬ್ಬ" ವನ್ನು ಬರೆದು ಅವನ ಧೀರೋದಾತ್ತಗುಣಗಳನ್ನು ಕೊಂಡಾಡಿದನೆಂದು ಈ ಪ್ರಶಸ್ತಿಯ ಒಕ್ಕಣಿಕೆಯಿಂದ ಗೊತ್ತಾಗುವುದು. ಕಥಾನಾಯಕನಾದ ಇಮ್ಮಡಿ ಕೆಂಪೇಗೌಡನು ಶಾ|| ಶಕ ೧೫೧೯ ರಿಂದ ಶಕ ೧೫೫೩ರ ವರೆಗೆ (ಕ್ರಿ. ಶ. ೧೫೯೭–೧೬೩೧) ರ ವರೆಗೆ ದಾನ ಮಾಡಿದ ಅವನ ಶಾಸನಗಳು ದೊರೆತಿವೆ. ಇವನ ಮಗನಾದ

“**ಮುಮ್ಮಡಿ ಕೆಂಪೇಗೌಡ**” ನ ದಾನ ಶಾಸನವು ಶಕ ೧೫೭೮ ರಲ್ಲಿ (ಕ್ರಿ. ಶ. ೧೬೫೬) ಮೊದಲಾಗಿ ದೊರೆತಿರುವುದರಿಂದ ಇಮ್ಮಡಿ ಕೆಂಪೇಗೌಡನು ಕ್ರಿ. ಶ. ೧೬೫೬ರ ವರೆಗೂ ಆಳಿಕೊಂಡಿದ್ದನೆಂದು ಹೇಳಬಹುದು. ಇದರಂತೆ ಇಮ್ಮಡಿ ಕೆಂಪೇಗೌಡನು ಕ್ರಿ. ಶ. ೧೫೯೭ ರಿಂದ ೧೬೫೬ರ ಸುಮಾರಿನವರೆಗೂ ಆಳಿಕೊಂಡಿದ್ದ. ಸುಮಾರು ೫೯ ವರ್ಷಗಳೊಳಗೇ ಈ ಜಯಪ್ರಶಸ್ತಿಯು ರಚನೆಯಾಗಿದ್ದಿರಬೇಕೆಂದು ಯಾರಿಗಾದರೂ ಗೊತ್ತಾಗುವುದು.

ಈ ಪ್ರಶಸ್ತಿಯ ಒಂದನೆಯ ಭಾಗದ ಹಾಡು ೯ ರಲ್ಲಿ – “ಪರಿಧಾವಿ ಸಂವತ್ಸರ ಕಾರ್ತಿಕ ಶುದ್ಧ ಏಕಾದಶಿ” ಯ ದಿವಸ ಸಂಜೆಯ ಹೊತ್ತಿನಲ್ಲಿ “**ವೆಂಕಟ ಭೂಪತಿ**” ಗೆ ಹೆದರಿ ಯುದ್ಧದಲ್ಲಿ ಸೋತ ಹಗೆಗಳು ಓಡಿಹೋದರೆಂದು ಹೇಳಿದೆ, ಇದರಂತೆ ನೋಡಿದರೆ ಈ ಪ್ರಶಸ್ತಿಯ ಮೊದಲನೆಯ ಭಾಗವು, ಇಮ್ಮಡಿ ಕೆಂಪೇಗೌಡನ ಆಳಿಕೆಯು ಮೊದಲಾದ. ಶಕ. ೧೫೧೯ ನೆಯ ಹೇವಿಳಂಬಿ ಸಂವತ್ಸರದ ಮುಂದೆ ಬರುವ ಶಕ ೧೫೩೪ ನೆಯ “**ಪರಿಧಾವಿ**” ಸಂವತ್ಸರದಲ್ಲಿ ಈ ಘಟನೆಯು ನಡೆಯಿತೆಂದು ಗೊತ್ತಾಗುವುದು. ಇದು ಕ್ರಿ. ಶ. ಸು ೧೬೧೨ನೆಯ ವರ್ಷವಾಗುವುದು. ಈ ಸಮಯದಲ್ಲಿ ವಿಜಯನಗರದ “ಅರವೀಡುವಂಶ”ದ ಒಂದನೆಯ ವೆಂಕಟಪತಿರಾಯನ ಆಳಿಕೆಯೂ ( ಕ್ರಿ. ಶ. ಸು ೧೫೮೬–೧೬೧೪ ) ಇತ್ತು. ಈ ವಿವರಣೆಯಂತೆ, ಈ ಜಯಪ್ರಶಸ್ತಿಯ ಮೊದಲನೆಯ ಭಾಗವು ಇಮ್ಮಡಿ ಕೆಂಪೇಗೌಡನ ಆಳಿಕೆಯ ೧೫ ನೆಯ ವರ್ಷವಾದ ಶಕ ೧೫೩೪ ನೆಯ (ಕ್ರಿ. ಶ. ೧೬೧೨ ) “ಪರಿಧಾವಿಸಂವತ್ಸರ” ದಲ್ಲಿ. ಅಥವಾ ಅದರ ಮಾರನೆಯ ವರ್ಷ ರಚನೆಯಾಗಿರಬಹುದೆಂದು ಹೇಳ ಬಹುದಾಗಿದೆ –

ಈ ಜಯಪ್ರಶಸ್ತಿಯ ಎರಡನೆಯ ಭಾಗದ ಹಾಡು. ೨೦ ರಲ್ಲಿ. “ವೆಂಕಟಪತಿರಾಯನಿಗೆ ಇಮ್ಮಡಿ ಕೆಂಪೇಗೌಡನು ಪಟ್ಟಗಟ್ಟಿದ ದಿನವನ್ನು ಹೇಳುತ್ತಾ – **ಭಾವಸಂವತ್ಸರದ ಮಾಘ ಶುದ್ಧ ಪಂಚಮಿ ಸುಮುಹೂರ್ತ**” ವೆಂದ್ು ಹೇಳಿರುವುದರಿಂದ ಈ ಭಾವಸಂವತ್ಸರವು. ಇಮ್ಮಡಿ ಕೆಂಪೇಗೌಡನಾಳುತ್ತಿದ್ದ ಶಕ. ೧೫೫೬ ನೆಯ ಭಾವಸಂವತ್ಸರವೇ ಆಗಿರಬೇಕು. ಈ ವರ್ಷವು. ಕ್ರಿ. ಶ ಸು|| ೧೬೩೪ ನೆಯ ವರ್ಷವಾಗುವುದು. ಈ ಕಾಲದಲ್ಲಿ ಅರವೀಡು ಮನೆತನದ “**ಇಮ್ಮಡಿ ವೆಂಕಟಪತಿರಾಯ**” ನಾಳುತ್ತಿದ್ದನು (ಕ್ರಿ. ಶ. ಸು ೧೬೧೨–

೧೬೩೯?) ಈ ಘಟನೆಗಳ ಹಿನ್ನೆಲೆಯಲ್ಲಿ ನೋಡಿದರೆ ಈ ಜಯಪ್ರಶಸ್ತಿಯ ಎರಡನೆಯ ಭಾಗವು ಶಕ ೧೫೫೬ ಅಥವಾ ಕ್ರಿ. ಶ. ಸು॥ ೧೬೩೪ ರಲ್ಲಿ ಬರೆದದ್ದೆಂದು ಹೇಳಬಹುದಾಗಿದೆ. ಈ ಮೇಲಿನ ವಿವರಣೆಗಳಂತೆ ಈ ಜಯಪ್ರಶಸ್ತಿಯಲ್ಲಿ ಮೊದಲನೆಯ ಭಾಗವು ಕ್ರಿ ಶ. ಸು. ೧೬೧೨ರಲ್ಲಿಯೂ ಎರಡನೆಯ ಭಾಗವು ಕ್ರಿ. ಶ. ಸು. ೧೬೩೪ ರಲ್ಲಿಯೂ ಇಮ್ಮಡಿ ಕೆಂಪೇಗೌಡನ ಆಳಿಕೆಯ ೩೭ನೆಯ ವರ್ಷದಲ್ಲಿಯೇ ಬರೆಯಲ್ಪಟ್ಟಿದೆಂದು ಹೇಳಬಹುದಾಗಿದೆ.—

## ಭಾಷೆ-ಛಂದಸ್ಸು

ಈ ಜಯಪ್ರಶಸ್ತಿಯಲ್ಲಿ ಉಪಯೋಗಿಸಿರುವ ಭಾಷೆಯು ಕ್ರಿ. ಶ. ೧೭ ನೆಯ ಶತಕದ ಪೂರ್ವಾರ್ಧದಲ್ಲಿ ಉಪಯೋಗಿಸುತ್ತಿದ್ದ, ಶಿಲಾ-ತಾಮ್ರ ಶಾಸನಗಳ, ಮತ್ತು ಇದೇ ಕಾಲದಲ್ಲಿ ಬರೆದಿರುವ ಇತರ ಗ್ರಂಥಗಳಂತೆಯೇ ಇರುವುದು. ಹೆಚ್ಚಾಗಿ ಹೋಲಿಸಿ ನೋಡಬೇಕೆನ್ನುವರು. ಶಕ, ೧೫೭೦ ಅಥವಾ ಕ್ರಿಶ, ೧೬೫೮ ರಲ್ಲಿ "**ಗೋವಿಂದವೈದ್ಯ**"ನು ಬರೆದಿರುವ "**ಕಂಠೀರವ ನರಸರಾಜೇಂದ್ರ ವಿಜಯ**"ವನ್ನು ಹೋಲಿಸಿ ನೋಡಬಹುದು. ಇದರಲ್ಲಿ ಉಪಯೋಗಿಸಿರುವ "ಉರ್ದುಶಬ್ದ"ಗಳು. ಗೋವಿಂದವೈದ್ಯನ ಗ್ರಂಥದಲ್ಲಿಯೂ ಉಪಯೋಗಿಸಲ್ಪಟ್ಟಿರುವುವು. ಗೋವಿಂದವೈದ್ಯನು ತನ್ನ ಗ್ರಂಥದಲ್ಲಿ ಒಂದು "**ಸಾಂಗತ್ಯ ಪದ್ಯ**"ವನ್ನು "ಉರ್ದುಭಾಷೆ"ಯಲ್ಲಿಯೇ ಹೀಗೆ ರಚಿಸಿರುವನು.

ದಿಲ್ಕರನ ಸಾಹೇಬು, ಅಬ್ ತುಮ ಜಾನ್‌ಪರ್ ।
[ಖಿಲ್ಕೀ] ಅಸಲೀ ಚೋಡ್ಕೇ ॥
ಡಲ್ಕ ತಲವಾರಿಮೇ ಮರಗಯೇ ತೋ ಹಮೇ ।
ಹಲ್ಕ ಹೋ ಜಾಯೇಂಗೇ ರಾಜಾಕು ॥ ೯೫

ಕಂಠೀರವ ನರಸರಾಜೇಂದ್ರ ವಿಜಯ ಸಂಧಿ ೧೮

ಕನ್ನಡ ಭಾಷೆಯ "ಯಕ್ಷಗಾನ ಕವಿ"ಗಳಲ್ಲಿ ಸರ್ವೋಚ್ಚ ಕವಿಯಾದ **ಹೊಸಕೋಟೆ ತಿಪ್ಪಯ್ಯನು** ತನ್ನ **ಪಂಚಭಾಷಾಮಯ ಕೃಷ್ಣಲೀಲೆ**" ಯಲ್ಲಿ ವಿವಿಧ ಛಂದಸ್ಸುಗಳಲ್ಲಡಗಿಸಿರುವ "ಉರ್ದು ಕಾವ್ಯಲಹರಿ"ಯು ಸರಿ ಸುಮಾರು ಇದರಂತೆಯೇ ಇರುವುದು ಎಲ್ಲರಿಗೂ ಪರಿಚಯವಾಗಿರುವ ಈ ವಿಷಯವನ್ನು ವಿವರಿಸುವ ಅಗತ್ಯವಿಲ್ಲವೆಂದು ವಿಸ್ತರಿಸಿ ಬರೆಯಲಿಲ್ಲ—

ಈ ಗುರು ನಂಜೇಶ್ವರನು ಈ "ಜಯಪ್ರಶಸ್ತಿ" ಯನ್ನು ಕನ್ನಡ ಜನತೆಯಲ್ಲಿ ಹಿಂದಿನಿಂದ ಇಂದಿನವರೆಗೂ ಬಳಕೆಯಲ್ಲಿರುವ "**ಯಕ್ಷಗಾನ ಪದ್ಧತಿ**" ಯಲ್ಲಿ ರಚಿಸಿರುತ್ತಾನೆ. ಈ ಹಾಡುಗಬ್ಬವು ಯಕ್ಷಗಾನ ಪದ್ಧತಿಯದಾದರೂ ಇದರಲ್ಲಿ ಕವಿಯು ತನ್ನದೇ ಆದ ಒಂದು ರೀತಿಯನ್ನು ಪ್ರದರ್ಶಿಸಿದ್ದಾನೆ. "ವೀರರಸ ಪ್ರಧಾನ" ವಾದ ಈ ಹಾಡುಗಬ್ಬದಲ್ಲಿ ಶಬ್ದಗಳು ಗುಡುಗಿನಂತೆ ಸಿಡಿಲೆರಗಿ ಬಿದ್ದಂತೆ ಹೆಬ್ಬಿದಿರೊಟ್ಟಿಲು ಕಾಡುಕಿಚ್ಚಿದ್ದು ಛಟಿಛಟಿಲೆಂದು ಭೋರ್ಗರೆಯುವಂತೆ ಸಿಂಹವು ಘರ್ಜಿಸಿದಂತೆ ಹುಲಿಗಳು ಘುರುಗುಟ್ಟಿದಂತೆ ಸಿಡಿದು ಸುರಿಯುವುವು. ಒಳ್ಳೆಯ ಯಕ್ಷಗಾನ ಕಲೆಯ ಹಾಡುಗಾರನು ವೀರರಸದಿಂದ ಹೇಳ ತೊಡಗಿದನೆಂದರೆ ಇಮ್ಮಡಿ ಕೆಂಪೇಗೌಡನು ಕಾಳಗದಲ್ಲಿದ್ದು ಘುಡು ಘುಡಿಸಿದಂತೆಯೂ ಅವನ ರಣದುಂದುಭಿಯು ಮೇಲೆದ್ದು ಮೊರೆಯುವಂತೆಯೂ ಕಣ್ಣೆದುರಿಗೇ ಕಿವಿಯನ್ನು ಮುಚ್ಚಿ ಅಪ್ಪಳಿಸುವುವು. ಮೊದಲನೆಯ ಹಾಡಿನಲ್ಲಿಯೇ ಅರ್ಥವಾದ ಮೇಲೆ ಕೂಡಿ ಬರುವ ಎದಿರು ಪ್ರಾಸಗಳು "ವೀರ**ರಸ**" ವನ್ನು ಉಕ್ಕಿಸಿ ತಲಪರಿಗೆಯಂತೆ ಹೊನಲಾಗಿ ಹರಿದು ಬರುವುವು. ಉಚಿತ ಶಬ್ದ ಸಂಪತ್ತಿನಿಂದ ಕೂಡಿದ ಉದ್ದಕ್ಕೂ ವೀರರಸವೇ ಪ್ರಧಾನವಾದ "ಯಕ್ಷಗಾನ ಕಾವ್ಯ" ಚಿಕ್ಕದಾದರೂ ನಾನು ತಿಳಿದ ಮಟ್ಟಿಗೆ ಇದೊಂದೇ ಒಂದಾಗಿದೆ.

ಗುರುನಂಜೇಶ್ವರ ಕವಿಯು ತನ್ನ ವೀರೋಚಿತ ಸಾಹಸಗಳ ಇತಿಹಾಸಕ್ಕೆ ಆಗರವಾಗಿದ್ದು ಈಗ ನಿದ್ರಿಸುತ್ತಿರುವ "**ಗೌಡ ಜನಾಂಗ**" ಕ್ಕೆ ಎಚ್ಚರಿಸುವ ಕಹಳೆಯಾಗಿ ಈ ಮಹಾಕಾರ್ಯವನ್ನು ಹೊಗಳುವ "**ವೀರಗಾದೆ**" ಯಾಗಿ ಅದೂ ಗೌಡಕುಲ ವಿಭೂಷಣನಾದ ಇಮ್ಮಡಿ ಕೆಂಪೇಗೌಡನ ವೀರಗಾಥೆಯಾಗಿ ಈ ಕೃತಿಯನ್ನು ರಚಿಸಿಟ್ಟು ಕನ್ನಡ ವೀರ ಸಾಹಿತ್ಯಕ್ಕೆ ಅದರಲ್ಲೂ "ಕನ್ನಡ ಯಕ್ಷಗಾನ ವೀರಸಾಹಿತ್ಯ" ಕ್ಕೆ ತನ್ನ ಅಮೂಲ್ಯವಾದ ಕಾಣಿಕೆಯನ್ನು ಮೊದಲು ಬಾರಿಯಾಗಿ ಕೊಟ್ಟಿರುವನು. "**ಭಕ್ತಿ ಸಾಹಿತ್ಯ**" ದ ಗಂಗಾಪ್ರವಾಹವೇ ಹರಿದು ಸಾಗುತ್ತಿದ್ದ "**ಯಕ್ಷಗಾನ ಸಾಹಿತ್ಯ**" ಪರಂಪರೆಯಲ್ಲಿ "**ಶಕ್ತಿ ಸಾಹಿತ್ಯ**" ದ ಹೊನಲನ್ನು ಮೇಲಿನಿಂದ ಸುರಿಸುವಾಗ ಸಿಡಿಲು-ಗುಡುಗುಗಳ ಅಬ್ಬರದೊಡನೆ ಹೇಡಿತನದಿಂದ ವಿರಾಗಿಗಳಾಗಿದ್ದ ಕನ್ನಡ ಜನತೆಯನ್ನು ಮೋಡಿಗೊಳಿಸಿದನು. ಆ ಕಾಲದಲ್ಲಿ

ಹಾಡುಗಬ್ಬಗಳ ಮೂಲಕ "ಬದುಕು-ಬಾಳು" ಗಳಲ್ಲಿ ಬೇಸರಗೊಳಿಸಿದ್ದ ಸಾಹಿತ್ಯವನ್ನು ಅದೇ ಹಾಡುಗಬ್ಬಗಳ ಮೂಲಕವೇ ಹರ್ಷಗೊಳಿಸಿದನು. ಈ ಬಗೆಯ ಸಾಹಿತ್ಯದ ಅಭಾವದಿಂದ ಆಗ ಜನತೆಯು ಜೀವನವನ್ನು ನಿಸ್ಸಾರ ವಾಗಿ ತಿಳಿದುಕೊಂಡು ಪರದಾಸ್ಯದಲ್ಲಿ ಬಿದ್ದಿತ್ತು. ಗುರುನಂಜೇಶ್ವರ ಕವಿಯು ಭಕ್ತಿ ಸಾಹಿತ್ಯದ ಗುಣವನ್ನುಳಿಸಿಕೊಂಡೇ ಆ ಭಕ್ತಿ ಸಾಹಿತ್ಯದ ನೆರಳಿನಲ್ಲಿಯೇ ತನ್ನ ಶಕ್ತಿ ಸಾಹಿತ್ಯವನ್ನು ನಾಲ್ಕೂ ನಿಟ್ಟಿನಲ್ಲಿ ಬೆಳಗಿಸಿದನು. ಈ ಬಗೆಯ "ಶಕ್ತಿ ಸಾಹಿತ್ಯ" ವು ಜನತೆಯನ್ನು ಎಂದೆಂದಿಗೂ ಎಚ್ಚರದಲ್ಲಿಡುವುದು. ಯುದ್ಧವಿಮುಖನಾಗಿದ್ದ ಅರ್ಜುನನಿಗೆ ಶ್ರೀಕೃಷ್ಣನಿಂದ "ಶಕ್ತಿ ಸಾಹಿತ್ಯ" ವಾದ "**ಭಗವದ್ಗೀತೆ**" ಯು ಹೇಗೆ ಬಂದಿತೋ ಹಾಗೆಯೇ ಈ "ಕೆಂಪೇಗೌಡನ ಜಯಪ್ರಶಸ್ತಿ" ಯು **ಕನ್ನಡದ ನೆಲದಲ್ಲಿ ಹೊರಬಂದ "ಭಗವದ್ಗೀತೆ"** ಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಇಮ್ಮಡಿ ಕೆಂಪೇಗೌಡನು ಬಾಳಿದ ನೆಲದಲ್ಲಿಯೇ ಪೂರ್ವಕಾಲದಲ್ಲಿ ಆಳಿ ಹೋದ "**ವೀರಭಟ**"ನಾದ "**ವಿಕ್ರಮಾದಿತ್ಯ ಗೌಡ**"ನ ವೃತ್ತಾಂತವನ್ನು ಶ್ರೀನಿವಾಸಪುರದ ತಾಲ್ಲೂಕು "ಬೆದಿರೂರು" ದಾನಶಾಸನದಲ್ಲಿ ಅವನ ಅಧಿರಾಜ ನಾದ "**ಗಂಗರಾಜ ಭೂವಿಕ್ರಮ**" ನು ಹೀಗೆ ಹೇಳುತ್ತಾನೆ—

"ಕೋಳಾಲ ವಿಷಯಾಧಿಪಃ, ಸುಪೂರ್ವಿಣಾಂ "ಸತ್ಶೂದ್ರಃ" ಕೇಶಗನಬಲಿ, ಸಿಂಹಸ್ಥಿರಮೆಂಟಬಾಣ ವಿದ್ಯಾಧರಃ ಪ್ರಭುಮೇರುಗವುಂಡ ತಸ್ಯಸೂನು ವಿಜಯಾ ದಿತ್ಯ ಗಾವುಂಡ ತಸ್ಯಸೂನುಃ ಪ್ರಭುಮೇರು ಗಾವುಂಡ ಹಿ ತಸ್ಯಸೂನುಃ ಮಾರ ಗಾವುಣ್ಡಃ; ತಸ್ಯ ಸೂನು. "ಮಮವೀರಭಟಃ ವಿಕ್ರಮಾದಿತ್ಯಗಾವುಂಡಸ್ಯ" ಹೊದಲಿ ವಿಷಯೇ "ಬಿದಿರೂರ್" ಮಯಾದತ್ತಂ ಅಸ್ಯಸೀಮಾಃ ಕರ್ಣಾಟಕೇ ಪ್ರವಕ್ಷ್ಯಾಮಿ"—

ಮೈಸೂರು ಆರ್ಕಿಲಾಜಿಕಲ್, ರಿಪೋರ್ಟ್ ೧೯೨೫, ಪು ೧೦೫—

ಈ ವೀರಪುರುಷನಾದ, ವಿಕ್ರಮಾದಿತ್ಯಗೌಡನ ವಂಶಪರಂಪರೆಯನ್ನೇ ಇಲ್ಲಿ ಹೇಳಿದೆ. ಹೊಯ್ಸಳ, ಇಮ್ಮಡಿ ಬಲ್ಲಾಳನ ಕಾಲದ "**ನಾಗಗೌಡ**"ನನ್ನು ತರೀಕೆರೆ ತಾಲ್ಲೂಕು ಅಮೃತಾಪುರದ ಅಮೃತೇಶ್ವರ ದೇವಾಲಯದ ಶಾಸನ ದಲ್ಲಿ-ಅವನ ವೀರಕೀರ್ತಿಯನ್ನು ಕೊಂಡಾಡುತ್ತಾ—

ಅರಿಸಾಮಂತ ಕುಳಾಕುಳಾಚಳ ದಳದ್ದಂಭೋಳಿ ದಂಭೋಳಿ ನಿ।
ಷ್ಠುರಸಾಮಂತ ಗಜೇಂದ್ರಯೂಥವಿದಳಂ ನಾಗಾರಿ, ನಾಗಾರಿ ಭೀ॥
ಕರ ಸಾಮಂತ ನಿಕಾಯ ದೈತ್ಯಬಳವತ್ಕಂಸಾರಿ, ಕೆಂಸಾರಿ ಸಂ।
ಗರ ರಂಗಕ್ಕಹಿವೈರಿ ವೈರಿಯೆನಿಪಂ ಸಾಮಂತ ನಾಗಾರ್ಜುನಂ॥

ಈ ನಾಗಗೌಡನ ಆರುಜನ ಮಕ್ಕಳಲ್ಲಿ ಹಿರಿಯನಾದ "ಚಿಕ್ಕಸಾಮಂತ ಕೇತ"ನನ್ನು ಕುರಿತು ಅವನ ಸಾಹಸ ಪರಾಕ್ರಮವನ್ನು—

ಛಟ ಛಟ ಛಛ್ಛಟ ಛಟಯೆನಲ್ ಮುರಿದತ್ತಿದಿರಾಂತ ಬೀರರಂ।
ಘಟಿ ಘಟಿಯಾಗಿ ನುಗ್ಗಿದುದು ತೋಳೆಲುಗಳ್ ನೆಳಿಲುಂ
ನೆಱಿಲ್ಲೆನಲ್॥
ಭಟರನನೇಕರಂ ಭರದೆ ಸೀಳ್ದುದು, ಸರ್ರೆನೆಸರ್ರೆನಲ್ಮದೋ।
ತ್ಕಟಮಿದೆ ಕೇತಪೆಂಬ ಕಲಿನಾಗ ಗವುಂಡನ ಗಂಧವಾರಣಂ॥

ವಿಸ್ತಾರವಾದ ಈ ಶಾಸನದಲ್ಲಿ ಕಡೆಗೆ ಗದ್ಯದಲ್ಲಿ—

ಸ್ವಸ್ತಿ ಶ್ರೀಮನ್ಮಹಾ ಸಾಮಂತ ಚೂಡಾಮಣಿಯುಂ, ಬಿರುದ ಸಾಮಂತ ವೀರಾಗ್ರಣಿಯುಂ ಉದ್ದಂಡ ಸಾಮಂತ ಗಿರಿವಜ್ರ ದಂಡನುಂ ವಾರವಿಳಾಸಿನೀ ಕುಸುಮ ಕೋದಂಡನುಂ ಕದನ ಪ್ರಚಂಡ ಸಾಮಂತ ಮದನ ಮಹೇಶ್ವರನುಂ ಚೋಳಕಾಂತಾ ಕಟಾಕ್ಷ ಕೈರವವನ ಶರಚ್ಚಂದ್ರನುಂ ವಿಭವಾಮರೇಂದ್ರನುಂ ಮೆನಿಸಿದ "ಹಾದಿಯ ಕೆರೆಯ ನಾಗಗಾವುಂಡಂ" ನನ್ನ ಮಕ್ಕಳುಂ ತನ್ನಿಂ ಪಿರಿಯ ಮೊಳಗೌಡ ಮಾಕಗೌಡನ ಮಕ್ಕಳುಂ ಮುಂತಾಗಿರ್ದು ಅಮಿತೆಯ ದಂಡನಾಯಕರು ಸುಪ್ರತಿಷ್ಠಿತಂ ಮಾಡಿದಮೃತೇಶ್ವರದೇವರ್ಗೆ—

ಎ, ಕ, ಸಂ ೬, ತರೀಕೆರೆ ಸಂ ೪೨

ದಾನವನ್ನು ಮಾಡಿರುತ್ತಾರೆ. ಇದೇ ನಾಗಗೌಡನ ನಾಲ್ಕನೆಯ ಮಗ ಲಕ್ಷ್ಮೀಧರನು ಹೊಯ್ಸಳ ಇಮ್ಮಡಿ ಬಲ್ಲಾಳನು ಸಾಯಲು ತನ್ನ ೧೦೦೦ ಭಟರು ಮತ್ತು ತನ್ನ ಹೆಂಡತಿ "**ಸುಗ್ಗಲದೇವಿ**"ಯೊಡನೆ ಅಗ್ನಿಪ್ರವೇಶ ಮಾಡಿದ ಅದ್ಭುತಕಥೆಯು ಒಂದು ಶಾಸನದಲ್ಲಿ ಬರೆದಿದೆ. ಇಲ್ಲಿ ಲಕ್ಷ್ಮನ ಮತ್ತು ಸುಗ್ಗಲದೇವಿಯ ಸಲುವಾಗಿ ಎರಡೆರಡು ಪದ್ಯಗಳನ್ನು ಇದರಡಿ ಎತ್ತಿ ಉದಹರಿಸುತ್ತೇನೆ—

ಎನೆ ನೆಗಳ್ದಾ ನೃಪೋತ್ತಮನ ಮಂತ್ರಿ ಶಿಖಾಮಣಿ ವಂದಿ ಬೃಂದ ನಂ।
ದನ ವನ ಮಾಧವಂ ಖರಕರ ಪ್ರತಿಮೋರ್ಜ್ಜಿತ ತೇಜನಾಹವಾ ॥
ವನಿಯೊಳರಾತಿ ಭೂಭುಜರ ನಿಕ್ಕುವ ತಕ್ಕಿನ ವಿಕ್ರಮಾರ್ಜುನಂ ।
ಮನುಜ ಮಹೇಶ್ವರಂ ಕುವರ ಲಕ್ಷ್ಮ ನನಿಂದಿತ ವೀರ ವಂಶಜಂ ॥

ಸಾಧಿಸಿ ಕೊಟ್ಟನಾಳ್ದ ಯದು ವಂಶದ ಮೇರುಗೆ ಕೂಡೆ ದಕ್ಷಿಣಾಂ।
ಭೋಧಿವರಂ ಧರಾವಳಯಮಂ ಬುಧಕೋಟಿಗೆ ಕೊಟ್ಟನರ್ಥಮಂ ॥
ಸಾಧನಮೋಯ್ತು ಸರ್ವನಿಧಿಯೆಂಬಿನೆಗಂ ದೊರೆಯಾರ್ ಕುಮಾರ ಲ—।
ಕ್ಷ್ಮೀಧರ ದೇವನೊಳ್ ಪತಿಹಿತ ಕ್ರಮದೊಳ್ ಪದೆದೀವ ದಾನದೊಳ್ ॥

ಆತನ ಕಾಂತೆ ಕುಂತುವಿನ ಕಾಂತೆಗೆ ರಾಮನ ಭಾಮೆಗಬ್ಜಸಂ।
ಜಾತನ ಚಿತ್ತವಲ್ಲಭೆಗೆ ರುದ್ರನ ಮೆಯ್ಯೊಡವಾದ ಭೂಧರೋ ॥
ದ್ಭೂತೆಗೆ ಚಂದ್ರನಂಗನೆಗೆ ನಾಗನ ನಾಗಿಣಿಗೀಕೆ ಪೋಲ್ವೆಯೇ।
ಭೂತಳದೊಳ್ ಪೆಱಿರ್ದೊರ್ರೆಯೆ ಸುಗ್ಗಲ ದೇವಿಗೆ ಮಿಕ್ಕರಾಣಿಯರ್ ॥

ವಾರಿಜ ದರ್ಪಣೇಂದು ಮುಖಿ ವಾರಣ ಹಂಸ ಮಯೂರಯಾನೆ ಕಲ್।
ಹಾರ ಕುರಂಗ ಮತ್ಸ್ಯನಿಭಲೋಚನೆ ಕೋಕಿಲ ಚಾರು ಕೀರ ವೀ ॥
ಣಾರವೆ ಕೋಕ ತಾಳಫಳ ಹೇಮಘಟಸ್ತನಿ ಯೆಂಡೊಡಾರು ಮೀ।
ಧಾರುಣಿಯೊಳ್‌ವಧೂತ್ತಮೆಗೆ ಸುಗ್ಗಲದೇವಿಗೆ ಪೋಲ್ವೆಯಪ್ಪರೇ ॥

ಬೇಲೂರು ನಂ. ೧೧೨

ಈ ಹಿಂದೆ ಉದಹರಿಸಿದ ಶಾಸನದಂತೆ ಅನಿಂದಿತ ವೀರವಂಶಜನಾದ "ಕುಮಾರ ಲಕ್ಷ್ಮ" ನಂತೆ ನಮ್ಮ ಕನ್ನಡನಾಡಿನಲ್ಲಿ "ಗೌಡವೀರರ-ಸಾಧ್ವಿಯರ-ದಾನಿಗಳ" ಇತಿಹಾಸವು ಕಲ್ಲುಬರೆಹದಲ್ಲಿ ಅಡಗಿ ಕೂತಿದೆ. ಅದನ್ನೆಲ್ಲಾ ಉದಹರಿಸುವುದಕ್ಕೆ ಇಲ್ಲಿ ಅವಕಾಶವಿಲ್ಲವಾಗಿದೆ. ತೋರಿಕೆಗಾಗಿ ಕೆಲವು ಪದ್ಯಗಳನ್ನು ಮೇಲೆ ಉದಹರಿಸಿದ್ದೇನೆ.

ವೀರಪುರುಷರ ವೀರಜೀವನದಿಂದ "ವೀರಸಾಹಿತ್ಯ"ವು ತನ್ನ ಸಾಹಿತ್ಯ ವಸ್ತುವನ್ನು ಆರಿಸಿಕೊಳ್ಳುವುದು. ಈ ಸಾಹಿತ್ಯದ ಮರಿಯಾಗಿ ವೀರ ಪುರುಷರು ಹುಟ್ಟಿ ಬರುವರು. ವೀರಸಾಹಿತ್ಯಕ್ಕೂ ವೀರಪುರುಷರಿಗೂ "ಬೀಜ-ವೃಕ್ಷ ನ್ಯಾಯ" ದಂತೆ ಎಂದೂ ಬಗೆಹರಿಯದ ಸಂಬಂಧವಿರುವುದು.

ವೀರಪುರುಷನ ವೀರಜೀವನವನ್ನು ಕುರಿತು ಬರೆಯುವವನೂ ವೀರಸಾಹಿತಿಯೇ ಆಗಿರಬೇಕು. ಈ ವೀರಸಾಹಿತಿಗಳು "ರಾಮ-ಕೃಷ್ಣಾ" ದಿಗಳ ವೀರಜೀವನ ವನ್ನು ಚಿತ್ರಿಸಿ ರಚಿಸಿಡದಿದ್ದಿದ್ದರೆ ಇಂದು ನಮ್ಮೆದುರಿಗೆ ರಾಮನೂ ಇರುತ್ತಿರ ಲಿಲ್ಲ. ಕೃಷ್ಣನೂ ಇರುತ್ತಿರಲಿಲ್ಲ. ಎಷ್ಟೇ ವೀರ ಪುರುಷನಾದರೂ ಜಗತ್ತಿನ ಉದ್ದಗಲಕ್ಕೂ ಅವನನ್ನು ಜನತೆಯ ಮಡಲಿನಲ್ಲಿಟ್ಟು ಉಳಿಸಿದವರು ವೀರ ಸಾಹಿತಿಗಳೇ ಆಗಿರುವರು.

ಗುರು ನಂಜೇಶ್ವರನು ಈ ಸಾಲಿಗೆ ಸೇರತಕ್ಕ ಕವಿಯೆಂದು ನನ್ನ ನಂಬಿಕೆ. ಈತನು ತನ್ನೆದುರಿಗೆ ವೀರನಾಗಿದ್ದ ಸುಗುಣಿಯೂ ಆಗಿದ್ದ "ಇಮ್ಮಡಿ ಕೆಂಪೇಗೌಡ" ನನ್ನು ತನ್ನ ಸಾಹಿತ್ಯದ ಮೂಲಕವಾಗಿ ಉಳಿಸಿ ದ್ದಾನೆ. ಅದರೊಡನೆ ತಾನೂ ಉಳಿದಿದ್ದಾನೆ. ಗೌಡಜನಾಂಗದಲ್ಲಿ ಎಲ್ಲರ ಮನಸ್ಸನ್ನೂ ಸೆಳೆದಿರುವ ಕೆಂಪೇಗೌಡನ ವಾಸ್ತವವಾದ ವೀರ ಜೀವನಚಿತ್ರ ವನ್ನು ದಾನಮಾಡಿ ಎಲ್ಲರ ಕೃತಜ್ಞಗೂ ಪಾತ್ರನಾಗಿದ್ದಾನೆ.

---

### ಕಥಾನಾಯಕ

# ಇಮ್ಮಡಿ ಕೆಂಪೇಗೌಡನ ವಂಶ ಮತ್ತು ಕಾಲ

ಈ ಜಯಪ್ರಶಸ್ತಿಯಲ್ಲಿ ಕವಿಯು ಇದರ ಕಾವ್ಯನಾಯಕನನ್ನು ಕೊಂಡಾಡುತ್ತಾ ಒಂದನೆಯ ಭಾಗದಲ್ಲಿ:—

'ಯಲಹಂಕನಾಡೆರೆಯ" ಮೋಹನ್ನರೂಪಾ ।
ಸುಖದಿ ಸುಸ್ಥಿರಬಾಳು ಸುಪ್ರತಾಪಾ ॥
"ನಾಚಯ ಕೆಂಪಧರಣೀಶ ನಣುಗ"
ಯಿಮ್ಮಡಿ ಕೆಂಪಭೂಪಾ ॥ ೧-೧೯ ॥

ಎಂದೂ ಮತ್ತೂ ಇದೇ ಎರಡನೆಯ ಭಾಗದ ಮುಂದಿನ ಹಾಡುಗಳಲ್ಲಿ:—

ಧರೆಯೊಳೆಲಹಂಕದ ನಾಡ ವರ ಶಾಸನೋದ್ಧಾರಾ ।
ವರಕಕೋದ್ಗಿರಿ ಗಂಗೇಶನ ಭಕ್ತಮಂದಾರಾ ॥
"ಹಿರಿಯ ಕೆಂಪಭೂವರನ-ಚನ್ನಾಂಬೆಯ ಕುಮಾರಾ ॥೨-೩೭॥

ಎಂದೂ ಹೇಳಿರುವುದರಿಂದ ಈ ಜಯಸ್ತುತಿಯ ಕಥಾನಾಯಕನು "**ಯಲಹಂಕನಾಡಿ**"ನ ರಾಜನೆಂದೂ ಇವನು "**ಹಿರಿಯ ಕೆಂಪಭೂಪತಿ ಚನ್ನಾಂಬೆ**"ಯರ ಮಗನೆಂದೂ ಮತ್ತು **ಕಕೋದ್ಗಿರಿ** ಅಥವಾ ಶಿವಗಂಗೆಯ ಗಂಗಾಧರಸ್ವಾಮಿಯ ಭಕ್ತನೆಂದೂ ಗೊತ್ತಾಗುವುದು.

ಇದರಿಂದ "ಯಲಹಂಕನಾಡಿನವರ ವಂಶ ವೃತ್ತಾಂತ, ಹಿರಿಯ ಕೆಂಪ ಭೂಪತಿಯ ಕಾಲಕ್ಕೆ ಹಿಂದಿನ ಈ ವಂಶದವರ ವೃತ್ತಾಂತ, ಈ ಪ್ರಶಸ್ತಿಯಲ್ಲಿ ಹೆಸರೆತ್ತಿ ಹೇಳಿರುವ ಹಿರಿಯ ಕೆಂಪರಾಜನ ಕಾಲದಿಂದ ಹಿಡಿದು ಅವನ ಮಗನೂ ಈ ಪ್ರಶಸ್ತಿಯ ಕಥಾನಾಯಕನೂ ಆದ "**ಇಮ್ಮಡಿ ಕೆಂಪೇಗೌಡ**"ನ ಜೀವನಪರಿಚಯ, ಇವನಿಂದೀಚೆಗೆ ಆಗಿಹೋದ "**ಯಲಹಂಕನಾಡು ದೊರೆಗಳ**" ವಿಚಾರ ಇವುಗಳನ್ನು ಇಲ್ಲಿ ವಿಚಾರ ಮಾಡಬೇಕಾಗಿದೆ:—

ಶಾಸನ ಸಾಹಿತ್ಯದಿಂದ ಗೊತ್ತಾಗುವ "ಯಲಹಂಕ ವಂಶ"ದವರ ಚರಿತ್ರೆಯನ್ನೂ ಈ ಸಲುವಾಗಿ ಈ ವಂಶದವರ ಆಶ್ರಯದಲ್ಲಿ ಕವಿಗಳು ಬರೆದ ಗ್ರಂಥಗಳಿಂದ ದೊರೆಯುವ ಐತಿಹಾಸಿಕಾಂಶಗಳನ್ನೂ ಈ ಕಾಲದಲ್ಲಿ ಬೇರೆಯ ಕವಿಗಳು ಬರೆದಿಟ್ಟಿರುವ ಗ್ರಂಥಗಳಲ್ಲಿ ಯಲಹಂಕನಾಡಿನ ಅರಸರ ಸಲುವಾಗಿ ಹೇಳಿರುವ ಸಂಗತಿಗಳನ್ನೂ ಸಂಗ್ರಹಿಸಿ ಯಲಹಂಕನಾಡಿನ ಗೌಡ ದೊರೆಗಳ ಪ್ರಾಮಾಣಿಕವಾದ ಕಾಲ-ಜೀವನ ವೃತ್ತಾಂತವನ್ನು ಕೂಡಿಸಿ ಬರೆಯ ಬೇಕಾಗಿದೆ—

ಈ "ಯಲಹಂಕ ವಂಶ"ದವರ ವೃತ್ತಾಂತವನ್ನು ಬರೆಯುವಾಗ ಮೊದಲಾಗಿ ಶಾಸನ ಸಾಹಿತ್ಯದಿಂದ ಗೊತ್ತಾಗುವ ಇವರ ಚರಿತ್ರೆಗೆ ಆಧಾರ ವಾಗಿ ಶಾಸನಗಳನ್ನು ಕಾಲಕ್ರಮಾನುಸಾರವಾಗಿ ಒಂದು ಪಟ್ಟಿಕೆಯಾಗಿ ಕೆಳಗೆಕೊಟ್ಟು ಆಮೇಲೆ ಈ ವಂಶದವರ ಚರಿತ್ರೆಗೆ ಆಧಾರ ಸಾಹಿತ್ಯವಾಗಿ ವಿವರಗಳನ್ನು ಒದಗಿಸುವ ಗ್ರಂಥಗಳನ್ನು ತಿಳಿಸಿ ಆಮೇಲೆ ನನಗೆ ತಿಳಿದು ಬಂದಿರುವ ಯಲಹಂಕನಾಡಿನ ಅರಸರ ಚರಿತ್ರೆಯನ್ನು ಸಂಕ್ಷೇಪವಾಗಿ ತಿಳಿಸುವ ಪ್ರಯತ್ನಮಾಡುತ್ತೇನೆ—

ಶಾಸನ ಸಾಹಿತ್ಯದಿಂದ "ಯಲಹಂಕ ನಾಡಿ"ನ ಅಧಿಕಾರಿಗಳಾದ ರಾಜರ ವೃತ್ತಾಂತವು ಹೀಗೆ ಗೊತ್ತಾಗುವುದು—

## ಯಲಹಂಕ ನಾಡಿನ ಹಿಂದಿನ ಅರಸರು

೧) ಶಕ. ೧೧೪೯ನೆಯ ಪ್ರಭವ ಸಂವತ್ಸರ ಚೈತ್ರ ಶುದ್ಧ ೧೦ ಬ್ರಿ. ವಾರದಲ್ಲಿ (ಕ್ರಿ. ಶ. ಸು. ೧೨೬೭) ಹೊಯ್ಸಳ ಚಕ್ರವರ್ತಿಯಾಗಿದ್ದ "ನರಸಿಂಹ ದೇವ" ನಾಳಿಕೆಯಲ್ಲಿ ಬರೆದ ದೊಡ್ಡಬಳ್ಳಾಪುರದ ಕೋಟೆಯ ಶಿಲಾಶಾಸನದಲ್ಲಿ "**ದೇಚಿದೇವರಸ**"ನು ಯಲಹಂಕದ ನೆಲೆವೀಡಿನಲ್ಲಿ ಆಳುತ್ತಿದ್ದನೆಂದು ಹೀಗೆ ಹೇಳಿದೆ—

> ಶ್ರೀಮನ್ಮಹಾಮಂಡಲೇಶ್ವರಂ ತ್ರಿಭುವನಮಲ್ಲ ನಂದಗಿರಿನಾಥ ಭಂಗಿ (ಬಂಡಿ?) ಕುಲಕಮಳ ವಿಕಸಿತ ಕಮಲದಿವಾಕರ ಸಿತಗರಗಂಡ ಸೆಣಸುವರ ಗಂಡ, ವೈರವೃಷಭಶಾರ್ದೂಳ, ಅಂಣ್ಣನಂಕಕಾಱ "ದೇಚಿದೇವರಸ"ರು

"ಯಲಹಂಕ"ದ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂ ರಾಜ್ಯಂಗೆಯುತ್ತಮಿರಲು"—

ದೊಡ್ಡಬಳ್ಳಾಪುರ ನಂ. ៩೧

೨) ಶಕ. ೧೨೫೦ನೆಯ ವಿಭದ ಸಂವತ್ಸರದ ಶ್ರಾವಣ ಬ. ೧೦ ಬು. (ಕ್ರಿ. ಶ. ಸು. ೧೩೨೮) ಈ ದಿನ ಬರೆದ ಹೊಯ್ಸಳ ವೀರಬಲ್ಲಾಳನಾಳಿಕೆಯಲ್ಲಿನ ದೊಡ್ಡಬಳ್ಳಾಪುರ ತಾಲ್ಲೂಕು "**ಹಾಡೋನಹಳ್ಳಿ**" ಶಿಲಾಶಾಸನದಲ್ಲಿ. "ಶ್ರೀ ಕಾ[ಮೆ]ಯ ದಂಣಾಯಕ"ನು.

"ಎಲಹಂಕನಾಡ" ಮಲದಿಪನಪುರ........[ಪತಿ?]-ಯ ಚಣಗ [ವುಡಗೆ?] ಹಡುವನಹಳ್ಳಿಯ ಚತುಸ್ಸೀಮೆಯನೂ ಚಂದ್ರ ಆದಿತ್ಯ ತಾರಂಬರಂ ಕೊಡಿಸಿದಂ."

ದೊಡ್ಡಬಳ್ಳಾಪುರ .ನಂ ೧೪

೩) ಇದೇ ವೀರಬಲ್ಲಾಳನ, ಶಕ. ೧೨೫೦ನೆಯ ವಿಭವ ಸಂವತ್ಸರದ ಶ್ರಾವಣ ಶು. ೧೫. ಶು. ವಾರದಲ್ಲಿ ಬರೆದ ದೊಡ್ಡಬಳ್ಳಾಪುರ ತಾಲ್ಲೂಕು "**ಕುರಿವಿಗೆರೆ**" ಶಿಲಾಶಾಸನದಲ್ಲಿ. ಮಹಾಪ್ರಧಾನ "**ಪೊನ್ನಣ್ಣನ ಮಗ**" "**ಕಾಮದಣ್ಣಾಯಕ**"ನು.

"ಎಲ[ಹ]ಂಕನಾಡ" ವಿ........ಡ ಗೌಂಡಂಗೆ, ಕುಯಿಮಿವಗೆಜ್ಜಿತಿ" ಚತುಸ್ಸೀಮೆಯನು...........ಚಂದ್ರಾದಿತ್ಯ........ಂನ ಪರಕಿವಿಟ್ಟ ಕೊಟ್ಟ............

ದೊಡ್ಡಬಳ್ಳಾಪುರ ನಂ. ೧೮

೪) ಇದೇ ಹೊಯ್ಸಳ ವೀರಬಲ್ಲಾಳನ ಶಕ. ೧೨೬೪ನೆಯ ಚಿತ್ರಭಾನು (ಕ್ರಿ. ಶ. ೧೩೪೨) ಸಂವತ್ಸರ ಚೈತ್ರ ೧೩ರ ಶಿಲಾಶಾಸನದಲ್ಲಿ "ಯಲಹಂಕನಾಡ ಪ್ರಭು"ಗಳೆಂದು ಇವರನ್ನು ಹೆಸರಿಸಿದೆ—

ಶ್ರೀಮನ್ಮಹಾ "ಯೆಲಹ[ಂ]ಕ ನಾಡಪ್ರಭು"ಗಳು ಬಯರೆದೇವ, ಮಾರಗವುಂಡ, ತಾಮಿರೆಪ್ಪ, ಮಾಚಿದೇವ, ಕಂನಗವುಂಡ—

ಬೆಂಗಳೂರು ನಂ. ೨೪

೫) ಇದೇ ವೀರಬಲ್ಲಾಳನ ಶಕ. ೧೨೬೫ (ಅಲ್ಲ ೧೨೬೪) ನೆಯ ಚಿತ್ರಭಾನು ಸಂವತ್ಸರ ಆಶ್ವೀಜ ಶು. ೧೫ ಈ ದಿನ ಬರೆದ ಬೆಂಗಳೂರು ತಾಲ್ಲೂಕು ಜಕ್ಕೂರು ಮುಕ್ಕರಿಗನ ಹೊಲದಲ್ಲಿರುವ ಶಾಸನದಲ್ಲಿ ಈ ಎಲಹಂಕ ನಾಡಿನ ಅಧಿಕಾರಿಗಳನ್ನು ಹೀಗೆ ಹೆಸರಿಸಿದೆ—

> ಶ್ರೀಮನು ಮಹಾ ಎಲಹಕ್ಕ (ಹಂಕ) ನಾಡ ಸಮಸ್ತಪ್ರಜೆ ಗಉಂಡುಗಳೂ "ಸಾಮಂತಾಧಿಪ" ಮೀಸೆಯರ ಗಂಡ ಚಿಕ್ಕಬಯಿರನಾಯ್ಕ, ಮಾರಯ ನಾಯ್ಕ.

ಬೆಂಗಳೂರು ನಂ. ೨೩

೬) ಇದೇ ವೀರಬಲ್ಲಾಳನ ಕಾಲದ ಶಕ ೧೨೬೪ ನೆಯ (ಕ್ರಿ. ಶ. ೧೩೪೨) ಚಿತ್ರಭಾನು ಸಂವತ್ಸರದ ಫಾಲ್ಗುಣ ಶು|| ೧ರಲ್ಲಿ ಬರೆದ ಬೆಂಗಳೂರು ತಾಲ್ಲೂಕು ನಾಗಶೆಟ್ಟಿಹಳ್ಳಿ ತಳವಾರನ ಹೊಲದಲ್ಲಿರುವ ಶಾಸನದಲ್ಲಿ ನಾಗವಾರದ ಮಾರಗೌಡನ ಮಗನಿಗೆ ದಾನಮಾಡಿದ ಸಂದರ್ಭದಲ್ಲಿ — ಅವನ ಸಾಮಂತಾಧಿಪತಿಗಳಾದ ಇವರು-

> "ಶ್ರೀಮನು ಮಹಾ ಯೆಲಹಕ್ಕ (ಹಂಕ) ನಾಡಪ್ರಭುಗಳು ಬ ಇರಿದೇವ ತಾಮಿಯೆಪ ಮಾಚಿದೇವ ಕಂನಗೋೀಡ (ಗೌಡ)

ಬೆಂಗಳೂರು ನಂ ೧೨೯.

೭) ಇದೇ ಮಾತುಗಳು ಇದೇ ವರ್ಷದ ಬೆಂಗಳೂರು ನಂ, ೩೪ರ ಶಾಸನದಲ್ಲಿಯೂ ಇವೆ – ಇಲ್ಲಿಯುವರೆಗೆ ಉದಹರಿಸಿರುವ ಶಾಸನಗಳಂತೆ ಕ್ರಿ. ಶ. ೧೨೬೭ ರಲ್ಲಿ ಯಲಹಂಕದ ನೆಲೆವೀಡಿನಲ್ಲಿ "**ಮಹಾಮಂಡಲೇಶ್ವರ ದೇಚರಸ**" ನೂ ಕ್ರಿ. ಶ. ೧೩೨೮ರಲ್ಲಿ ದೇ ಯಲಹಂಕ ನಾಡಿನಲ್ಲಿ "**ಎಚಣ [ಗವುಡ]**" ನೂ ಕ್ರಿ. ಶ. ೧೩೪೨ ರಲ್ಲಿ ಯಲಹಂಕದ ಪ್ರಭು ಸಾಮಂತಾಧಿಪ ಮೀಸೆಯರ ಗಂಡ "**ಬಯಿರೆ ದೇವ**" ನೂ ಆಳುತ್ತಿದ್ದರೆಂದು ಗೊತ್ತಾಗುವುದು. ಇವರೆಲ್ಲರೂ ಇಮ್ಮಡಿ ಕೆಂಪೇಗೌಡನ ಹಿರಿಯರಾಗಿದ್ದು ಈ ಮೊದಲು "ಯಲಹಂಕ ನಾಡಿ" ನ ಪ್ರಭುಗಳಾಗಿದ್ದರೆಂದು ಊಹಿಸಬಹುದಾಗಿದೆ.

ಈ ಮುಂದೆ ಇಮ್ಮಡಿ ಕೆಂಪೇಗೌಡನ ತಂದೆಯಾದ ಹಿರಿಯ ಕೆಂಪೇಗೌಡನಿಗೆ ಮೊದಲು ಯಲಹಂಕನಾಡ ಪ್ರಭುಗಳಾಗಿ ಆಳಿದವರೆಂದು ಇದೇ ವಂಶದ

ಕಡೆಯ ರಾಜನಾದ "**ಕೆಂಪವೀರಪ್ಪಗೌಡ**"ನ ಮಂಗಳೂರು ಜಿಲ್ಲೆ ಸುಬ್ರಹ್ಮಣ್ಯ ಶಾಸನದಲ್ಲಿ ಹೆಸರೆತ್ತಿ ಹೇಳಿರುವ ಈತನ ಪೂರ್ವಜರೆಂದು ತಿಳಿಸಿರುವ "**ಜಿಯ್ಯಪ-ಗಿಡ (ಡ್ಡ) ಪ ನಾಚಪ ಕೆಂಪನಾಚಪ**" ಇವರನ್ನು ಇಲ್ಲಿ ಹೀಗೆ ಹೇಳಿದೆ —

ಜಿಯ್ಯಪೋ ಗಿಡ (ಡ್ಡ) ಪ ಶ್ಚೈವ-ನಾಚಪೋ ಕೆಂಪನಾಚಪಃ ।
ಹಿರಿಯ ಕೆಂಪ ಮಹೀಪಾಲ-ಯಿಂಮಡಿ ಕೆಂಪಭೂವರ ॥

ಮುಮ್ಮಡಿ ಕೆಂಪಧೀರಶ್ಚ-ವೀರಭೂಪಾಲ ಚಂದ್ರಮಾಃ ।
ಕೆಂಪ ವೀರ ನೃಪಾಲಶ್ಚ-ಸುಪುತ್ರಃ ಕುಲದೀಪಕಾಃ ॥

ಮೈಸೂರು ಆರ್ಕಿಲಾಜಿಕಲ್ ರಿಪೋರ್ಟ್ ೧೯೪೩-ಪು। ೧೬೦

ಈ ನಾಲ್ಕು ಜನಗಳಲ್ಲಿ ಕಡೆಯುವನಾದ "ಕೆಂಪನಾಚಪ್ಪ" ಕೆಂಪನಾಚೇಗೌಡನೆಂದು ಹಿರಿಯ ಕೆಂಪೇಗೌಡನ ಶಾಸನಗಳಲ್ಲಿಯೂ ಇಮ್ಮಡಿ ಕೆಂಪೇಗೌಡನ ಕಾಲದ ಶಾಸನಗಳಲ್ಲಿಯೂ ಹೆಸರಿಸಿರುತ್ತದೆ. ಈ ಜಯಪ್ರಶಸ್ತಿಯಲ್ಲಿಯೂ ಇಮ್ಮಡಿಕೆಂಪೇಗೌಡನನ್ನು-"**ನಾಚಯ ಕೆಂಪಧರಣೀಶನಣುಗ**" (೧-೧೯) ಎಂದು ಹೇಳಿ ಇವನ ತಂದೆಯಾದ "**ಹಿರಿಯ ಕೆಂಪೇಗೌಡ**"ನನ್ನು "**ನಾಚಯ ಅಥವಾ ಕೆಂಪನಾಚಯ ಗೌಡ**"ನ ಮಗನೆಂಬುದನ್ನು ಗುರುತಿಸಿ ತೋರಿಸಿದೆ- ಈ ಹಲವಾರು ಕಾರಣಗಳಿಂದ ಈ ಹಿರಿಯ ಕೆಂಪೇಗೌಡನಿಗೆ ಮೊದಲು ಇಲ್ಲಿ ಹೆಸರಿಸಿರುವ "ಜಿಯ್ಯಪ್ಪ-ಗಿಡ್ಡಪ್ಪ, ನಾಚಪ್ಪ, ಕೆಂಪನಾಚಪ್ಪಗೌಡರೆಂಬುವರು ಈ ವಂಶದಲ್ಲಿ ಆಳಿಬಾಳಿದ್ದರೆಂದು ಧಾರಾಳವಾಗಿ ನಂಬಬಹುದಾಗಿದೆ—

ಈ ಮಹನೀಯರಲ್ಲಿ ಯಾರ ಶಾಸನವೂ ನನಗೆ ದೊರೆತಿರುವುದಿಲ್ಲವಾದುದರಿಂದ ಅವರ ಸರಿ ಸರಿಯಾದ ಕಾಲವನ್ನಾಗಲೀ ಅವರ ಕಾಲದಲ್ಲಾದ ಘಟನೆಯನ್ನಾಗಲೀ ತಿಳಿದುಕೊಳ್ಳುವುದಕ್ಕೆ ಸಾಧನವಿಲ್ಲದೆ ಸುಮ್ಮನಿರಬೇಕಾಗಿದೆ. ಶಾಸನಗಳು ದೊರೆಯುವ ಹಿರಿಯ ಕೆಂಪೇಗೌಡನ ಕಾಲದಿಂದ ಮುಂದೆ ಕ್ರಮವಾಗಿ ಈ ವಂಶದವರ ವೃತ್ತಾಂತವನ್ನು ಮುಂದೆ ವಿವರಿಸಿದೆ —

## ಹಿರಿಯ ಕೆಂಪೇಗೌಡ

೮) ಶಕ ೧೪೧೨ (ಅಲ್ಲ ೧೪೫೩) ನೆಯ ಖರ ಸಂವತ್ಸರ ಮಾಘ ಶು॥ ೧೧ರಲ್ಲಿ ವಿಜಯನಗರಂದ ಅಚ್ಯುತರಾಯನಾಳಿಕೆಯಲ್ಲಿ ಬರೆದ ಬೆಂಗಳೂರು ತಾಲ್ಲೂಕು ದಾಸನಪುರದ ಚವುಡೇಶ್ವರ ದೇವಾಲಯದ ಮುಂದಿರುವ ಶಿಲಾ ಶಾಸನದಲ್ಲಿ ದಾನಮಾಡಿದಾಗ ಈ ಹಿರಿಯ ಕೆಂಪದೇವರಸನನ್ನು—

> ಕೆಂಪ [ಯ] ದೇವರಸ........ಲೆಗೆ ನಾಯಕ ತನಕೆ ಪಾಲಿಸಿದ "ಎಲಹ[ಂ]ಕ ರಾಜ್ಯಕೆ ಸಲುವ ಸಿವನ ಸಮುದ್ರದ ಸೀಮೆ" —
>
> ಬೆಂಗಳೂರು ನಂ ೫೨

ಈ ಶಾಸನದಲ್ಲಿ ಬರೆದಿರುವ ಶಕ ೧೪೧೨ ಖರವಲ್ಲ. ಶಕ ೧೪೫೩ ಖರವಾಗುವುದು. ಇದು ಕ್ರಿ. ಶ. ೧೫೩೧ ಕ್ಕೆ ಸರಿಹೋಗುವುದು. ಈ ಶಾಸನದಲ್ಲಿ ವಿಜಯನಗರದಲ್ಲಿ ಅಚ್ಯುತರಾಯನಾಳುತ್ತಿದ್ದನೆಂದು ಹೇಳಿರುವುದರಿಂದ (ಕ್ರಿ. ಶ. ೧೫೩೦-೧೫೪೨) ಇದು ಈ ಕಾಲದಲ್ಲೇ ಬರೆದದ್ದಾಗಿರಬೇಕು. ಈ **"ಕೆಂಪಯ ದೇವರಸ"**ನು ಇದೇ ವರ್ಷ ಆಳ ತೊಡಗಿದ್ದು ಇದು ಇವನಾಳಿಕೆಯ ಮೊದಲು ವರ್ಷವಾಗಿರಬೇಕು. ಇಲ್ಲಿ ಹೇಳಿರುವ "ಕೆಂಪಯ ದೇವರಸ" ನೇ ಹಿರಿಯ ಕೆಂಪೇಗೌಡನೆಂದು ತಿಳಿದುಕೊಳ್ಳಬಹುದಾಗಿದೆ.

೯) ...........ಅಕ್ಷಯ ಸಂವತ್ಸರ ವೈಶಾಖ ಬಹುಳ ೧೦ ಲು ಬರೆದ ತುಮಕೂರು ಜಿಲ್ಲೆ ಕುಣಿಗಿಲು ತಾ॥ ಕಸಬೆ ನರಸಿಂಹ ದೇವಾಲಯದ ಈಶಾನ್ಯಕ್ಕೆ ಇರುವ ಆಂಜನೇಯನ ಗುಡಿಯ ಬಳಿಯಿರುವ ಶಿಲಾಶಾಸನದಲ್ಲಿ ದಾನಮಾಡಿದ ವೃತ್ತಾಂತದಲ್ಲಿ—

> ಕುಣಿಗಿಲ...........ಕೊ............ಕಸಪನಾಯಕ ಚಿಕ್ಕಲಿಂಗ ಹಿರಿಯಲಿಂಗ-- (ಇವರು) ತಮಗು "ತಂಮ....[ರಸ] ಕೆಂಪಯಗ ಉಡರು" ಅಯ್ಯನವರು ಧರ್ಮವಾಗಬೇಕೆಂದು........"
>
> ಕುಣಿಗಿಲು ನಂ. ೧೦

ಈ ಶಿಲಾಶಾಸನದಲ್ಲಿ ಹೇಳಿರುವ "ಅಕ್ಷಯ" ವು ಶಕ ೧೪೮೮ ಅಕ್ಷಯವೇ ಆಗಿರಬೇಕು. ಇದು ಕ್ರಿ. ಶ. ೧೫೬೬ ಆಗುವುದು. ಇದರಲ್ಲಿ ಹೆಸರೆತ್ತಿರುವ

**"ಕೆಂಪಯ ಗವುಡ"** ನ ಹೆಸರಿನೊಡನೆ ಇಮ್ಮಡಿ ಮುಮ್ಮಡಿ ಮೊದಲಾದ ವಿಶೇಷಣವೇನೂ ಇಲ್ಲವಾದುದರಿಂದ ಇವನು "ಹಿರಿಯ ಕೆಂಪೇಗೌಡ" ನೇ ಎಂದು ತಿಳಿದುಕೊಳ್ಳಬಹುದಾಗಿದೆ—

೧೦) ............ಪಾರ್ಥಿವ ಸಂವತ್ಸರ ಮಾರ್ಗಶಿರ ಶು|| ೧೩ ಈ ದಿನ ಡಣಾಯಕನ ಪುರದ ಕೊಮಾರದೇವರ ಕುಮಾರ ಹಿರಿಯಯ್ಯದೇವರಿಗೆ ದಾನಮಾಡಿದ ಕುಣಿಗಿಲು ತಾಲ್ಲೂಕು ಹೊಸೂರು ಗ್ರಾಮದ ವೆಂಕಟನ ಹೊಲದಲ್ಲಿರುವ ಶಿಲಾ ಶಾಸನದಲ್ಲಿ—

> "ಯಲವಂಕ ನಾಡ ಪ್ರಭು ಕೆಂಪಯ್ಯಗೌಡಾರು" ಕೊಟ ಪುರವುಟದ ಸಸನ............[ದ ವಿಷ?] ಯ ಕ್ರಮವೆಂತೆಂದರೆ".—
>
> ಕುಣಿಗಿಲು ನಂ ೨೩.

ಇಲ್ಲಿ ಹೆಸರಿಸಿರುವ "ಕೆಂಪಯ್ಯ ಗೌಡ"ನು "ಯಲಹಂಕ ನಾಡಪ್ರಭು"ವೆಂದು ಕೀರ್ತಿತನಾಗಿದ್ದಾನೆ. ಇವನ ಹೆಸರಿನೊಡನೆ ಇಮ್ಮಡಿ, ಮುಮ್ಮಡಿ ಮೊದಲಾದ ವಿಶೇಷಣವೇನೂ ಇರುವುದಿಲ್ಲ. ಆದುದರಿಂದಿವನು ಹಿರಿಯ ಕೆಂಪೇಗೌಡನೇ ಆಗಿರಬೇಕು. ಇಲ್ಲಿ ಹೇಳಿರುವ ಪಾರ್ಥಿವ ವರ್ಷವು ಶಕ ೧೪೦೭ ನೆಯ ಪಾರ್ಥಿವ ಸಂವತ್ಸರವೇ ಆಗಿರಬೇಕು. ಇದು ಕ್ರಿ. ಶ. ೧೪೮೫ ನೆಯ ವರ್ಷದ್ದಾಗಿರಬೇಕು—

೧೧) ಶಕ ೧೪೭೦ (ಕ್ರಿ. ಶ. ೧೪೮೮) ನೆಯ ಸರ್ವಧಾರಿನಾಮ ಸಂವತ್ಸರ ಚೈತ್ರ ಶುದ್ಧ ೧೦ ಮೇಷ ಸಂಕ್ರಾಂತಿ ದಿನ ಬರೆದ ಶಿವಗಂಗೆ ಗಂಗಾಧರ ದೇವಾಲಯದ ನಂದಿಮಂಟಪಕ್ಕೆ ಪಶ್ಚಿಮ ಭಾಗದ ಘಂಟೆಯ ಮೇಲಿರುವ ಬರೆಹದಲ್ಲಿ—

> ಶ್ರೀಮಂನ್ಮಹಾ ಯಲಹ[ಂ]ಕ ನಾಡಪ್ರಭು, ಕೆಂಪನಾಚೇಗೌಡರ ಮಕ್ಕಳೂ ಕೆಂಪೇಗೌಡರೂ ತಮಗೆ ಪುತ್ರಪೌತ್ರ ಪಾರಂಪರೆಯಾಭಿವ್ರಿದ್ಧಿಯಾಗಲೆಂದು ತಂಮ ಪಿತೃ ಮಾತೃಗಳಿಗೆ ಮೋಕ್ಷವಾಗಲಿಯೆಂದು ಸಮರ್ಪಿಸಿದ ಘಂಟೆಗೆ ಮಂಗಳ ಮಹಾ ಶ್ರೀ ಶ್ರೀ ಶ್ರೀ—
>
> ಬೆಂಗಳೂರು ಸಪ್ಲೆಮೆಂಟ್ ನೆಲಮಂಗಲ ನಂ. ೧೧೯

೧೨) ಶಕ. ೧೫೩೦ನೆಯ (ಕ್ರಿ. ಶ. ೧೬೦೮) ಕೀಲಕ ಸಂವತ್ಸರದ ಕಾರ್ತಿಕ ಬ॥ ೧೦ ಬು. ಬರೆದ ಶಿವಗಂಗೆ ಗಂಗಾಧರೇಶ್ವರ ದೇವಾಲಯದಲ್ಲಿರುವ ಹಿರಿಕೆಂಪೇಗೌಡನ ವಿಗ್ರಹದ ಬುಡದಲ್ಲಿರುವ ಬರೆಹದಲ್ಲಿ—

> ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕವರ್ಷಂಗಳು ೧೫೩೦ನೆಯ ಕೀಲಕ ಸಂವತ್ಸರದ ಕಾರ್ತೀಕ ಬ॥ ೧೦ ಬು. "ಬೆಂಗಳೂರ ಕೆಂಪನಾಚಯ ಗೌಡರ ಕೊಮಾರ, ಕೆಂಪಯುಗೌಡನು ಗಂಗಾಧರಸ್ವಾಮಿಯ ಪಾದಕೆ ಸದಾ ನಮುಸ್ಕಾರ—
>
> ಬೆಂಗಳೂರು ಸಪ್ಲಿಮೆಂಟ್ ನೆಲಮಂಗಲ ಸಂ. ೧೦೭

## ಇಮ್ಮಡಿ ಕೆಂಪೇಗೌಡ

೧೩) ಶಕ ೧೫೧೯ (ಕ್ರಿ. ಶ. ೧೫೯೭ ಹೇವಿಳಂಬಿ ಸಂವತ್ಸರ ವೈಶಾಖ ಶುದ್ಧ ೧೫ ಈ ದಿನ ಇಮ್ಮಡಿ ಕೆಂಪೇಗೌಡನು ಬೆಂಗಳೂರು ಪೌರೋಹಿತ್ಯದ ಹಕ್ಕನ್ನು, ವೇದಟ್ಲ ಅನಂತಭಟ್ಟನಿಗೆ ದಾನಮಾಡಿದ ದಾನಪತ್ರದಲ್ಲಿ ತನ್ನ ವಂಶ ವೃತ್ತಾಂತವನ್ನು ಹೇಳುತ್ತಾ—

> ಯಲಹಂಕ ನಾಡಪ್ರಭುಗಳಾದ ಚತುರ್ಥ ಗೋತ್ರರಾದ ಕೆಂಪನಾಚೇ ಗೌಡರಯ್ಯನವರ ಪೌತ್ರರಾದ ಕೆಂಪೇಗೌಡರಯ್ಯನವರ ಪುತ್ರರಾದ ಇಮ್ಮಡಿ ಕೆಂಪೇಗೌಡರಯ್ಯನವರು—
>
> (ಶ್ರೀ ಸೂರ್ಯನಾರಾಯಣಶಾಸ್ತ್ರಿಗಳಲ್ಲಿನ ದಾನ ಶಾಸನದ ನಕಲು)

೧೪) ಶಕ ೧೫೯೨ (ಅಲ್ಲ ೧೫೨೯) ಪ್ಲವಂಗನಾಮ ಸಂವತ್ಸರ ವೈಶಾಖ ಶು॥ ೧೦ರಲ್ಲಿ (ಕ್ರಿ. ಶ. ೧೬೦೭) ಮಾಗಡಿ ಸೋಮೇಶ್ವರ ದೇವಾಲಯಕ್ಕೆ ಸೇವಾದಿಗಳಿಗಾಗಿ, ಹಂಚಿಕುಪೆ, ವೋತ (ಮತ್ತ ?) ಅತಿಮಿಗೆರೆ, ಕೆಂಪಾಪುರ ಗಳನ್ನು ದಾನಮಾಡಿದ ದಾನಶಾಸನದಲ್ಲಿ—

> "ಸದಾಶಿವಗೋತ್ರದ ಯಲಹಂಕ ನಾಡ ಪ್ರಭುಗಳಾದ ಕೆಂಪನಂಜೇ (ನಾಚೇ) ಗೌಡರ ಪೌತ್ರರಾದ, ಹಿರಿಯ ಕೆಂಪೇಗೌಡರ ಪುತ್ರರಾದ ಯಿಂಮಡಿ ಕೆಂಪೇಗೌಡರು"
>
> ಮಾಗಡಿ ನಂ. ೨

ಈ ದಾನಶಾಸನದಲ್ಲಿ ಶಕ ಸಂಖ್ಯೆಯನ್ನು ಲೇಖಕನು ೧೫೨೯ನ್ನು ೧೫೯೨ ಎಂದು ತಪ್ಪಾಗಿ ಬರೆದಿದ್ದಾನೆ. ಇಲ್ಲಿಯೂ, ಮುಂದೆ ಉದಹರಿಸುವ ಮಾಗಡಿ

ನಂ. ೧ ರಲ್ಲಿಯೂ, ಕೆಂಪನಾಚೇಗೌಡ ಎಂಬುದನ್ನು "ಕೆಂಪನಂಜೇಗೌಡ" ಎಂದು ತಪ್ಪಾಗಿ ಓದಿ ಪ್ರಕಟಿಸಿರುತ್ತಾರೆ.

೧೫) ಶಕ ೧೫೨೭ನೆಯ ಶರಚ್ಚೈತ್ರ ಚಂದ್ರ ಗ್ರಹಣ ಸಮಯದಲ್ಲಿ ಇಮ್ಮಡಿ ಕೆಂಪೇಗೌಡನು ಸಂವತ್ಸರ ವ್ರತವನ್ನು ಮಾಡಿ "ಕೆಂಪಾಪುರ ಅಗ್ರಹಾರ" ವನ್ನು ದಾನಮಾಡಿದಾಗಿನ ಶಾಸನದಲ್ಲಿ—

ಸಾರ್ಧೈಕ ಸಂಯುಕ್ತ ಸಹಸ್ರ ಮಿಶ್ರ–ನಕ್ಷತ್ರ ಸಂಖ್ಯಾಸು ಗತಾಸು ನೂನಂ।
ಶ್ರೀ ಶಾಲಿವಾಹಸ್ಯ ಶಕಪ್ರಮಾಣೇ–ದದೌ ದ್ವಿಜೇಭ್ಯಃ ಪ್ರಭುರಗ್ರಹಾರಂ ॥
ವಿಶ್ವಾವಸು ಶರಚ್ಚೈತ್ರ – ಸುಧಾಂಶು ಗ್ರಹಣೇ ತದಾ ।
ಶಾಲಿವಾಹ ಶಕೇ ಸಪ್ತ ನೇತ್ರ ಬಾಣೇಂದು ಸಂಖ್ಯಕೇ ॥೧೫೨೭॥
ಗತೇಂ ಮಡಿಪದೋ ಪೇತ – ಕೆಂಪಯಾರ್ಯೋ ಮಹಾಪ್ರಭುಃ ।
ಕೆಂಪನಾಚೇಗೌಡ ಪೌತ್ರಃ–ಕೆಂಪೇಗೌಡಾತ್ಮಜಸ್ತಥಾ ॥
ಚತುರ್ಥಗೋತ್ರಜಸ್ಸಮ್ಯ ಗ್ವಿಭಾತ್ಯೇಂ ಮಡಿಸಾಗರಂ ।
ಅಕರೋದಗ್ರಹಾರಂ ತಂ - ಸ್ವನಾಮಕ ಪುರಸ್ಸರಂ ॥
ಸೋಮೇಶ ಸನ್ನಿಧಾವಷ್ಟ – ಚತ್ವಾರ್ಯಾತ್ಮಕ ಸಂಖ್ಯಕಾಃ ।
ವೃತ್ತೀಃ ಪ್ರಕಲ್ಪ್ಯ ವಿಪ್ರೇಭ್ಯೋ – ದದಾವೈಕೈಕಶಃ ಕ್ರಮಾತ್ ॥

(ಶ್ರೀ॥ ಸೂರ್ಯನಾರಾಯಣ ಶಾಸ್ತ್ರಿಗಳಲ್ಲಿರುವ ದಾನಶಾಸನದ ನಕಲು)

೧೬) ಇದೇ ಇಮ್ಮಡಿ ಕೆಂಪೇಗೌಡನು ದಾನ ಮಾಡಿದ "**ಅಯಿವರ ಕಂಡಪುರ**" ಅಗ್ರಹಾರದ ದಾನಪತ್ರ ಶಕ ೧೫೨೭ ವಿಶ್ವಾವಸು (ಕ್ರಿ. ಶ. ೧೬೦೫)

"ಮಾಗಡಿ ಕೆಂಪೇಗವುಡರಯನವರು" ಯೀ ಅಗ್ರಹಾರ ಮಾಡಿದು ಶಾಲಿವಾಹನ ಶಕೆ

೧೫೨೭ನೆ ವಿಶ್ವಾವಸು ನಾಮ ಸಂವತ್ಸರ ಚೈತ್ರ ಶುದ್ಧ ೧೫ ಸೋಮೋಪರಾಗ ಪರ್ವಪಲ್ಲಿ ಹಲಸೂರು ಸೋಮೇಶ್ವರ ಸನ್ನಿಧಾನದಲ್ಲೂ ಧಾರಾಗ್ರಹಿತವಾಗಿ ಕೊಟಂತ್ಹಾ ವೃತ್ತಿಗಳು ೪೮ಕ್ಕೆ ವಿವರ್‍ರಾ—

(ಶ್ರೀ ಸೂರ್ಯನಾರಾಯಣ ಶಾಸ್ತ್ರಿಗಳಲ್ಲಿರುವ ದಾನಶಾಸನದ ನಕಲು)

೧೭) ಶಕ ೧೫೪೯ನೆಯ (ಕ್ರಿ. ಶ. ೧೬೨೭) ಪ್ರಭವ ಸಂವತ್ಸರ ಮಾಘ ಶುದ್ಧ ೧೩ ಈ ದಿನ ಬರೆದ ಬೆಂಗಳೂರು ಬಳ್ಳಾಪುರ ಪೇಟೆ ರಂಗನಾಥ

ದೇವಾಲಯದ ಶಿಲಾಶಾಸನದಲ್ಲಿ ಕೆಲಮಂದಿ ಶೆಟ್ಟಿಗಳು ದೇವಾಲಯದ ಪಡಿತರ ಸೇವಾದಿಗಳಿಗಾಗಿ ಮಾಡಿದ ದಾನದಲ್ಲಿ—

ಯಲಹಂಕ ನಾಡ ಪ್ರಭುವುಲೈನ ಕೆಂಪನಾಚಯ ಗೌನಿವಾರಿ ಪೌತ್ರುಲೈನ ಕೆಂಪ್ಪೇಗೌನಿವಾರಿ ಪುತ್ರುಲೈನ "ಯಿಂಮಡಿ ಕೆಂಪೇಗೌನಯ್ಯ" ವಾರು ಸದ್ಧರ್ಮಪ್ರತಿಪಾಲಕುಲೈ ಸುಖರಾಜ್ಯ ಚೇಯುಚುನ್ನಗಾನು-

ಬೆಂಗಳೂರು ನಂ. ೧

೧೮) ಶಕ ೧೫೫೨ನೆಯ (ಕ್ರಿ. ಶ. ೧೬೩೦) ಪ್ರಮೋದೂತ ಸಂವತ್ಸರ ವೈಶಾಖ ಶುದ್ಧ ಪಂಚಮಿ ದಿನ ಮಾಗಡಿ ಸೋಮೇಶ್ವರ ದೇವಾಲಯದ ಸೇವಾದಿಕಾರ್ಯಗಳಿಗಾಗಿ "ಕಂಚುಗಾರ್ರಹಳ್ಳಿ ಹಾಲುಶಿಂಗನ ಹಳ್ಳಿ" ಗಳನ್ನು ದಾನಮಾಡಿದಾಗ ಬರೆದ ಶಾಸನದಲ್ಲಿ—

ಚತುರ್ಥ ಗೋತ್ರದ ಯಲಹ[ಂ]ಕ ನಾಡಪ್ರಭುಗಳಾದ ಕೆಂಪನಂಜೇ (ನಾಚೇ) ಗೌಡರ ಪೌತ್ರರಾದ ಹಿರಿಕೆಂಪೇಗೌಡರ ಪುತ್ರರಾದ ಯಿಂಮಡಿ ಕೆಂಪೇಗೌಡರು "-

ಮಾಗಡಿ ನಂ ೧

೧೯) ಶ್ರೀ ದುರ್ಮತಿ ಸಂವತ್ಸರ ಆಷಾಢ ಬ|| ೧೧ ಲು ಬರೆದ ಮಾಗಡಿ ತಾಲ್ಲೂಕು ಕಲ್ಯದ ಕಲ್ಲೇಶ್ವರ ದೇವಾಲಯದ ಮುಂದಿನ ಗುಂಡಿನ ಮೇಲೆ ಇರುವ ಶಾಸನದಲ್ಲಿ ಈ ಕಲ್ಲೇಶ್ವರನ ಪೂಜಾರಿ ಸ್ಥಾನಿಕ ಲಿಂಗಣ್ಣ ಒಡೆಯರ ಮಗ ಚಂದ್ರಶೇಖರ ವೊಡೆಯನು-

ಯಲಹಂಕನಾಡ ಪ್ರಭು ಯಿಂಮಡಿ ಕೆಂಪೇಗೌಡರಿಗೆ ಪುಣ್ಯವಾಗಬೇಕೆಂದು "—

ಮಾಗಡಿ ನಂ ೨೫

ಇಲ್ಲಿ ಹೇಳಿರುವ ದುರ್ಮತಿಯು ಇಮ್ಮಡಿ ಕೆಂಪೇಗೌಡನಾಳಿಕೆಯ ಶಕ ೧೫೪೩ ನೆಯ ದುರ್ಮತಿಯಾಗಿರಬೇಕು. ಇದು ಕ್ರಿ. ಶ. ೧೬೨೧ನೆಯ ವರ್ಷವಾಗುವುದು.

೨೦) ಶಕ ೧೫೫೩ನೆಯ ಪ್ರಜೋತ್ಪತ್ತಿ ಸಂವತ್ಸರ (ಕ್ರಿ. ಶ. ೧೬೩೧)ದ ವೈಶಾಖ ಶುದ್ಧ ೧೫ ಚಂದ್ರ ಗ್ರಹಣದ ದಿನ ನರಸಿಂಹಭಟ್ಟನಿಗೆ-ಕಲ್ಯ, ಮಾಡಬಳು, ಹರತಿ, ಮಾಗಡಿ ಸ್ಥಳದ ಪುರೋಹಿತ ಹಕ್ಕನ್ನು ದಾನಮಾಡಿದ ದಾನ ಶಾಸನದಲ್ಲಿ

ಚತುರ್ಥಗೋತ್ರದ ಯಲಹ[ಂ]ಕ ನಾಡ ಪ್ರಭುಗಳಾದ ಕೆಂಪನಾಚೇಗೌಡರ ಪೌತ್ರರಾದ ಹಿರಿಯ ಕೆಂಪೇಗೌಡರ ಪುತ್ರರಾದ ಯಿಂಮಡಿ ಕೆಂಪೇಗೌಡರಾದ (ರವರ.)

ಬೆಂಗಳೂರು ಸಪ್ಲಿಮೆಂಟ್ ಮಾಗಡಿ ನಂ ೮೪.

೨೧) ಶ್ರೀಮುಖ ಸಂವತ್ಸರ ವೈಶಾಖ ತೃತೀಯ ಗುಜ್ಜರಿ ವಿಶ್ವನಾಥನೆಂಬಾತನು ಮಠ, ಧರ್ಮಶಾಲೆಯನ್ನು ಕಟ್ಟಿಸಿದಾಗ ಬರೆದ ಬೆಂಗಳೂರು ಚಿಕ್ಕಪೇಟೆ ತೂಗದ ಅಚ್ಚಪ್ಪನ ಮನೆ ಮಗ್ಗಲಿನಲ್ಲಿರುವ ಶಿಲಾಶಾಸನದಲ್ಲಿ-

[ಶ್ರೀ] ಮತು ಯಲಹಂಕನಾಡ ಪ್ರಭುವುಲೈನ "ಯಿಂಮಡಿ ಕೆಂಪಯಗೌನಿ" ಆಯವಾರಿಕಿ, ಆ ಚಂದ್ರಾರ್ಕಂಗಾನು ಪುತ್ರ ಪೌತ್ರ ಪಾರಂಪರ್ಯಮು, ಧರ್ಮಂ ಕೊರಕು "—

ಬೆಂಗಳೂರು ನಂ. ೨

ಈ ಶಾಸನದಲ್ಲಿ ಶಕಸಂಖ್ಯೆ ಬರೆಯದಿದ್ದರೂ ಇದು ಇಮ್ಮಡಿ ಕೆಂಪೇಗೌಡ ನಾಳಿಕೆಯಿದ್ದ. ಶಕ. ೧೫೫೫ ನೆಯ ಶ್ರೀಮುಖವೇ ಆಗಿರಬೇಕು. ಇದು ಕ್ರಿ. ಶ. ೧೬೩೩ ನೆಯ ವರ್ಷವಾಗುವುದು:—

ಇಲ್ಲಿ ಉದಹರಿಸಿರುವ ಶಾಸನ ಸಾಕ್ಷ್ಯದಂತೆ, ಶಕ. ೧೫೫೧ ರಿಂದ ೧೫೫೫ ರವರೆಗೂ (ಕ್ರಿ. ಶ. ೧೫೯೭-೧೬೩೩)ರವರೆಗೂ ಇಮ್ಮಡಿ ಕೆಂಪೇಗೌಡನ ಶಾಸನಗಳು ದೊರೆಯುವುವು—

## ಮುಮ್ಮಡಿ ಕೆಂಪೇಗೌಡ

೨೨) ಶಕ. ೧೫೭೮ (ಕ್ರಿ. ಶ. ೧೬೫೬) ನೆಯ ದುರ್ಮುಖಿನಾಮ ಸಂವತ್ಸರದ ಜ್ಯೇಷ್ಠ ಬ|| ೩೦ ಸೂರ್ಯಗ್ರಹಣ ಸಮಯದಲ್ಲಿ, ಹೆಬ್ಬಾರೈಯನವರ ಮಗ ಶೇಷೈಯ್ಯಂಗಾರನಿಗೆ, "ವೀರಭದ್ರಸ್ವಾಮಿ " ಸನ್ನಿಧಿಯಲ್ಲಿ, "ಕೊಟಗಾರ ಶಿದ್ದಪ್ಪನಹಳ್ಳಿ"ಯನ್ನು "ಶ್ರೀನಿವಾಸಪುರ "ವೆಂದು ಹೆಸರಿಟ್ಟು ದಾನಮಾಡಿದ ಶಾಸನದಲ್ಲಿ ಹೇಳಿಕೊಂಡ ವಂಶ ವೃತ್ತಾಂತದಲ್ಲಿ-

ಚತುರ್ಥ ಗೋತ್ರದ ಯಲಹಂಕನಾಡ ಪ್ರಭುಗಳಾದ ಕೆಂಪೇಗವುಡರಯ್ಯನವರ ಪೌತ್ರರಾದ ಯಿಂಮಡಿ ಕೆಂಪೇಗೌಉಡರಯ್ಯನವರ ಪುತ್ರರಾದ "ಮುಮ್ಮಡಿ ಕೆಂಪೇಗಉಡರಯ್ಯನವರು –

(ಮಾಗಡಿ ಶ್ರೀ|| ಶ್ರೀನಿವಾಸಯ್ಯಂಗಾರರ ಬಳಿಯಿರುವ ದಾನಪತ್ರದ ನಕಲು)

೨೩) ...........ಪ್ಲವಂಗ ಸಂವತ್ಸರ ಕಾರ್ತಿಕ ಬ|| ೧೧. ಈ ದಿನ ಬರೆದ ಮಾಗಡಿ ತಾಲ್ಲೂಕು "ಅಳಲು ಕುಪ್ಪೆ"ಗ್ರಾಮದ ಊರುಬಾಗಿಲು ತೊಲೆ ಮೇಲೆ ಇರುವ ಶಿಲಾಶಾಸನದಲ್ಲಿ ಇದೇ ಮುಮ್ಮಡಿ ಕೆಂಪೇಗೌಡನು- "ಕಾಶಿಯಲ್ಲಿ ಮಠವನ್ನು ಕಟ್ಟಿಸಿ ಲಿಂಗಪ್ರತಿಷ್ಠೆ ಮಾಡಿಸಿ, ಈ ಮಠದ ಧರ್ಮಕ್ಕಾಗಿ ಅಳಲುಕುಪ್ಪೆ ಗ್ರಾಮವನ್ನು "ಅಕ್ಷಂತಲ ಮುದ್ದುಭಟ್ಟನಿಗೆ ದಾನಮಾಡಿರುತ್ತಾನೆ"

ಮಾಗಡಿ ನಂ. ೩೫

ಈ ಶಿಲಾಶಾಸನದಲ್ಲಿ ಶಕ ಸಂಖ್ಯೆ ಬರೆದಿರುವುದಿಲ್ಲ. ಆದರೂ ಈ ಶಾಸನವು ಮುಮ್ಮಡಿ ಕೆಂಪೇಗೌಡನಾಳಿಕೆಯು ಇದ್ದ ಈ ಹಿಂದಿನ ಶಾಸನವಾದ ಶಕ ೧೫೭೮ರ ಮುಂದಿನ ಪ್ಲವಂಗ ಸಂವತ್ಸರವೇ ಆಗಿರಬೇಕು. ಇದು ಶಕ ೧೫೮೯ರ ಪ್ಲವಂಗವೇ ಆಗಿರಬೇಕು. ಇದು ಕ್ರಿ. ಶ. ಸು|| ೧೬೬೭ನೆಯ ವರ್ಷದ್ದಾಗುವುದು —

೨೪) ಶಕ ೧೫೯೬ನೆಯ (ಕ್ರಿ. ಶ. ೧೬೭೪) ಆನಂದ ನಾಮ ಸಂವತ್ಸರ ಆಷಾಢ ಶುದ್ಧ ೧೫ರಲ್ಲಿ ಬರೆದ ಮಾಗಡಿ ತಾಲ್ಲೂಕು ಕೆಂಪಸಾಗರದ ಬಸವಣ್ಣನ ಗುಡಿ ಮುಂದಿರುವ ಶಿಲಾಶಾಸನದಲ್ಲಿ–ಇದೇ ಮುಮ್ಮಡಿ ಕೆಂಪೇಗೌಡನು ಇದೇ ಗ್ರಾಮವನ್ನು ೧೨ ವೃತ್ತಿಗಳಾಗಿ ವಿಂಗಡಿಸಿ ದಾನಮಾಡಿರುತ್ತಾನೆ.

ಮಾಗಡಿ ನಂ. ೩೦

೨೫) ಇದೇ ದಿನ ಬರೆದ ಇದೇ ಕೆಂಪಸಾಗರದ ಕೆರೆ ಕೋಡಿಬಳಿಯಲ್ಲಿರುವ "ವಿಶ್ವೇಶ್ವರ **ದೇವಸ್ಥಾನ**ದ ಬಳಿಯಲ್ಲಿರುವ ಶಿಲಾಶಾಸನದಲ್ಲಿ– ಚತಲದಶೆಬೋಯಿ" ಗೆ ಹಾಲಸೆಟ್ಟಿಹಳ್ಳಿಯಲ್ಲಿ ಹೊಲಕಂಡುಗ–ಸಿರಿಪತಿಹಳ್ಳಿ ಯಲ್ಲಿ ಮೂಗಂಡಗ ದಾನಮಾಡಿದ್ದಾನೆ –

ಬೆಂಗಳೂರು ಸಪ್ಲಿಮೆಂಟ್ ಮಾಗಡಿ (ತಿದ್ದುಪಡಿ) ನಂ. ೩೦

೨೬) ಶಕ ೧೫೯೮ (ಅಲ್ಲ ೧೫೯೬) ನೆಯ ಆನಂದ ಸಂ|| ಆಷಾಢ ಶುದ್ಧ ೧೫ ರಲ್ಲಿ ಮುಮ್ಮಡಿ ಕೆಂಪಸಾಗರ ಕಟ್ಟಿದ "ಭಕ್ತದಾಶೆ ಬೋಯಿ" ಗೆ ದಾನ ಮಾಡಿದ ಶಾಸನದಲ್ಲಿದೇ ಮುಮ್ಮಡಿ ಕೆಂಪೇಗೌಡನು "ಹಾರೋಹಳ್ಳಿ" ಯಲ್ಲಿ ಭೂಮಿದಾನ ಮಾಡಿದ್ದಾನೆ –

ಮಾಗಡಿ ನಂ. ೫

ಇದರಂತೆ ಮುಮ್ಮಡಿ ಕೆಂಪೇಗೌಡನ ದಾನ ಶಾಸನಗಳು ಶಕ ೧೫೭೮ ರಿಂದ ಶಕ ೧೫೯೯ರ ವರೆಗೂ (ಕ್ರಿ. ಶ. ೧೬೫೬–೧೬೭೪) ದೊರೆಯುವುವು.

## ದೊಡ್ಡವೀರಪ್ಪಗೌಡ

೨೭) ಶಕ ೧೬೦೩ ನೆಯ (ಕ್ರಿ. ಶ. ೧೭೮೧) ದುರ್ಮತಿನಾಮ ಸಂವತ್ಸರ ಭಾದ್ರಪದ ಶುದ್ಧ ೧೫. ಈ ದಿನ ದಾನ ಮಾಡಿದ ತಿರುಮಲೆ ಶಿಂಗಯ್ಯಂಗಾರನ :ಬಳಿಯ ದಾನ ಶಾಸನದಲ್ಲಿ ಶ್ರೀವತ್ಸಗೋತ್ರದ ತಿಮ್ಮಪ್ಪಯ್ಯಂಗಾರ ಮೊದಲಾದ ೧೩ ಜನಗಳಿಗೆ "ಕಲ್ಲಿಕೆರೆ-ಡೊಂಕನಪುರ" ಗಳನ್ನು ದಾನ ಮಾಡಿದಾಗ ಹೇಳಿಕೊಂಡಿರುವ ವಿವರದಲ್ಲಿ ಹೀಗೆ ಬರೆದಿದೆ.

> ಚತುರ್ಥಗೋತ್ರದ ಯಲಹಂಕನಾಡು ಪ್ರಭುಗಳಾದ ಇಂಮುಡಿ ಕೆಂಪೈಯ ಗೌಡರವರ ಪೌತ್ರರಾದ ಮುಮ್ಮಡಿ ಕೆಂಪೈಯ ಗೌಡರವರ ಪುತ್ರರಾದ ಮುಮ್ಮಡಿ ದೊಡ್ಡವೀರಪ್ಪಗೌಡರಯ್ಯನವರು —
>
> ಮಾಗಡಿ ನಂ ೮

೨೮) ಶಕ ೧೬೦೭ ನೆಯ (ಅಲ್ಲ ೧೬೦೬) ನೆಯ ರಕ್ತಾಕ್ಷಿನಾಮ ಸಂವತ್ಸರ ಮಾರ್ಗಶಿರ ಶುದ್ಧ ೧೫ರಲ್ಲಿ ಮಾಗಡಿ ತಾಲ್ಲೂಕು ಶೀಗೆಕುಪ್ಪೆಯನ್ನು ಶೃಂಗೇರಿ ಮಠಕ್ಕೂ ಅರರೆಬೇಡರ ಹಳ್ಳಿಯನ್ನು ಸುಬ್ರಹ್ಮಣ್ಯಸ್ವಾಮಿಗೂ ಅಳಲು ಕುಪ್ಪೆಯನ್ನು ತನ್ನ ಹಿರಿಯರು ಕಾಶೀಧರ್ಮಕ್ಕೆ ಕೊಟ್ಟಿದ್ದಾರೆಂದೂ ಹೇಳಿರುವ ಮಾಗಡಿ ವೆಂಕಟಪತಿ ಭಟ್ಟನ ಬಳಿಯಿದ್ದ ದಾನಪತ್ರದ ನಕಲಿ ನಂತೆ ಹೇಳಿರುವ ಪ್ರವರದಲ್ಲಿ–

> ಸದಶಿವಗೋತ್ರದ ಯಲಹಂಕ ನಾಡ ಪ್ರಭುಗಳಾದ ಯಿಂಮ್ಮಡಿ ಕೆಂಪೇ ಗವುಡರೈಯ್ಯನವರ ಪೌತ್ರರಾದ ಮುಂಮುಡಿ ಕೆಂಪೇಗಉಡರಯ್ಯನವರ ಪುತ್ರರಾದ ಮುಮ್ಮಡಿ ದೊಡ್ಡವೀರಪ್ಪಗೌಡರಯ್ಯನವರು.
>
> ಬೆಂಗಳೂರು ಸಪ್ಲಿಮೆಂಟ್ ನಂ. ೮೫

ಇದರಂತೆ, ಶಕ. ೧೬೦೩ ಮತ್ತು ಶಕ. ೧೬೦೬ ನೆಯ ವರ್ಷದ ಎರಡು ಶಾಸನಗಳು (ಕ್ರಿ. ಶ. ೧೬೮೧–೧೬೮೪) ಮಾತ್ರ ದೊಡ್ಡವೀರಪ್ಪಗೌಡನದಾಗಿ ದೊರೆತಿರುವುವು.

## ಕೆಂಪವೀರಪ್ಪಗೌಡ

೨೯) ಶಕ. ೧೬೧೯ನೆಯ (ಕ್ರಿ. ಶ. ೧೬೯೭) ಪ್ರಭವ ಸಂವತ್ಸರ ಆಷಾಢಶುದ್ಧ ೧೫ ರಲ್ಲಿ ಬ್ರಾಹ್ಮಣರಿಗೆ ದಾನಮಾಡಿದ. ಮಾಗಡಿ ವೆಂಕಟಪತಿ ಭಟ್ಟನಲ್ಲಿದ್ದ ದಾನಪತ್ರದ ನಕಲಿನಲ್ಲಿ—

> ಸದಾಶಿವಗೋತ್ರದ ಯಲಹಂಕ ನಾಡ ಪ್ರಭುಗಳಾದ ಮುಂಮುಡಿ ಕೆಂಪಗವಡರೈಯ್ಯನವರ ಪೌತ್ರರಾದ ಮುಂಮ್ಮಡಿ ದೊಡವೀರಪಗವಡರೈಯನವರ ಪುತ್ರರಾದ ಯಿಂಮುಡಿ ಕೆಂಪವೀರಪ್ಪಗೌಡರೈಯನವರು ಬ್ರಾಂಹರಿಗೆ ಬರಶಿಕೊಟ್ಟ ತಾಂಬ್ರದ ಶಾಸನಾ—

ಬೆಂಗಳೂರು ಸಪ್ಲಿಮೆಂಟ್ ನಂ. ೮೩

೩೦) ಶಕ. ೧೬೩೧ (ಅಲ್ಲ ೧೬೨೦)ನೆಯ ಬಹುಧಾನ್ಯ ಸಂವತ್ಸರ (ಕ್ರಿ. ಶ. ೧೬೯೮) ಆಶ್ವೀಜ ಶುದ್ಧದಲ್ಲಿ ಈ ಕೆಂಪವೀರಪ್ಪಗೌಡನು ಮಂಗಳೂರು ಜಿಲ್ಲೆ. ಸುಬ್ರಹ್ಮಣ್ಯದೇವಾಲಯದ ಉಪಯೋಗಕ್ಕಾಗಿ ಮಾಗಡಿ ಹತ್ತಿರವಿರುವ "ಸುಬ್ಬರಾಯ ಬೇಡರಹಳ್ಳಿ"ಯನ್ನು ದಾನಮಾಡಿದ ದಾನ ಶಾಸನದಲ್ಲಿ—

> ಜಿಯ್ಯಪೋ ಗಿಡ(ಡ್ಡ)ಪಶ್ಚೈವ-ನಾಚಪೋ ಕೆಂಪನಾಚಪಃ ।
> ಹಿರಿ(ಯ) ಕೆಂಪಮಹೀಪಾಲ-ಯಿಂಮುಡಿ ಕೆಂಪಭೂವರ [ಃ] ॥
> ಮುಮ್ಮಡಿ ಕೆಂಪಧೀರಶ್ಚ-ವೀರಭೂಪಾಲ ಚಂದ್ರಮಾಃ ।
> ಕೆಂಪವೀರ ನೃಪಾಲಶ್ಚ ಸುಪುತ್ರಃ ಕುಲದೀಪಕಾಃ ॥

ಮೈಸೂರು ಆರ್ಕಿಲಾಜಿಕಲ್ ರಿಪೋರ್ಟ್ ೧೯೪೩ ಪುಟ ೧೬೧

೩೧) ಶಕ ೧೬೩೨ನೆಯ (ಕ್ರಿ. ಶ. ೧೭೧೦) ವಿಕೃತುನಾಮ ಸಂವತ್ಸರ ಕಾರ್ತಿಕ ಬ॥ ೩೦ ಸೂರ್ಯಗ್ರಹಣ ಪರ್ವಕಾಲದಲ್ಲಿ ತನ್ನ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು, ಮಾಗಡಿ ಸೀಮೆಗೆ ಸೇರಿದ "ಚಕ್ರಭಾವಿ" ಹೋಬಳಿ ಕೆಂಪನಹಳ್ಳಿಗೆ ಪ್ರತಿನಾಮಧೇಯ "ಶ್ರೀನಿವಾಸಪುರ"ವನ್ನು ಮುಡುಂಬೆ ತಿಮ್ಮಪ್ಪಯ್ಯನ ಮಗ ವೆಂಕಪ್ಪಯ್ಯನಿಗೆ ದಾನಮಾಡಿದಾಗ ಬರೆದ ದಾನಪತ್ರದಲ್ಲಿಯೂ ತನ್ನ ವಂಶವೃತ್ತಾಂತವನ್ನು ಹಿಂದಿನ ನಂ. ೨೯ ರಂತೆಯೇ ಹೇಳಿರುತ್ತಾನೆ—

(ಮಾಗಡಿ ಶ್ರೀ. ಶ್ರೀನಿವಾಸಯ್ಯಂಗಾರರಲ್ಲಿರುವ ದಾನಪತ್ರದ ನಕಲು.

೩೨) ಶಕ ೧೬೩೯ (ಅಲ್ಲ ೧೬೩೪) ನೆಯ ನಂದನನಾಮ ಸಂವತ್ಸರ (ಕ್ರಿ. ಶ. ೧೭೧೨) ವೈಶಾಖ ಬ|| ೫ ಈ ದಿನ ಬರೆದ ಮಾಗಡಿ ಸೋಮೇಶ್ವರ ದೇವಸ್ಥಾನದ ಸೇವಾದಿಗಳಿಗಾಗಿ "ಜುಟ್ಟನಹಳ್ಳಿ-ಶಿರುಪತ ಹಳ್ಳಿಗಳನ್ನು ದಾನಮಾಡಿದ ದಾನ ಶಾಸನದಲ್ಲಿಯೂ ಹಿಂದಿನ ಪ್ರವರವನ್ನೇ ಹೇಳಿ ಕೊಂಡಿರುತ್ತಾನೆ.

(ಮಾಗಡಿ ನಂ ೪)

೩೩) ಶಕ ೧೬೩೪ನೆಯ ನಂದನ ಸಂವತ್ಸರ (ಕ್ರಿ. ಶ. ೧೭೧೨) ವೈಶಾಖ ಶುದ್ಧ ೫. ಈ ದಿನ ಬರೆದ ಮಾಗಡಿ ತಾಲ್ಲೂಕು ಮಾಯನಾಯ್ಕನ ಹಳ್ಳಿ ದೇವಾಲಯದ ಪೂರ್ವಭಾಗದಲ್ಲಿರುವ ಶಿಲಾಶಾಸನದಲ್ಲಿ ಹಲವು ಮಂದಿ ಬ್ರಾಹ್ಮಣರಿಗೆ ವೃತ್ತಿಗಳನ್ನು ಭೂದಾನ ಮಾಡಿದಾಗಲೂ ಮೇಲಿನಂತೆಯೇ ಪ್ರವರವನ್ನು ಹೇಳಿಕೊಂಡಿದ್ದಾನೆ.

ಮಾಗಡಿ ನಂ. ೪೨

೩೪) ಶಕ ೧೬೩೯ (ಅಲ್ಲ ೧೬೩೪) ನೆಯ ನಂದನ ನಾಮ ಸಂವತ್ಸರ (ಕ್ರಿ. ಶ. ೧೭೧೨) ದ ವೈಶಾಖ ಬ|| ೫ ಈ ದಿನ ಮಾಗಡಿ ಸೋಮೇಶ್ವರ ಪ್ರತಿಷ್ಠಾಕಾಲದಲ್ಲಿ ಮುಡುಂಬೆ ತಿಮ್ಮಪ್ಪಯ್ಯನ ಮಗ ವೆಂಕಪ್ಪಯ್ಯನಿಗೆ ಮಾಗಡಿ ಸೀಮೆಗೆ ಸೇರಿದ "ಕಲ್ಯದ-ಕೃಷ್ಣನ ಪಾಳ್ಯ" ವನ್ನು ದಾನಮಾಡಿದಾಗ ಇದೇ ಮೇಲಿನ ವಂಶವೃಕ್ಷವನ್ನೇ ಹೇಳಿಕೊಂಡಿದ್ದಾನೆ. ಇದರಲ್ಲಿ ಕೆಂಪವೀರಪ್ಪಗೌಡನನ್ನು "**ಅಖಿಲಕ್ಷ್ಮಾ ಮಂಡಲಾಧೀಶ್ವರ**"ನೆಂದು ಸಂಸ್ಕೃತ ಭಾಷೆಯ ಈ ವೃತ್ತದಲ್ಲಿ ಹೀಗೆ ಹೊಗಳಿದೆ-

ಸ್ವಸ್ತಿಶ್ರೀ "ಯಲವಂಕ ವಂಶತಿಲಕ" ಶ್ರೀ ಕೆಂಪಭೂಪಾತ್ಮಜಃ |
ಶ್ರೀ ವೀರಕ್ಷಿತಿಪಾಲಸೂನು ರಖಿಲಕ್ಷ್ಮಾ ಮಂಡಲಾಧೀಶ್ವರಃ ||
ಶ್ರೀಮನ್ಮುಮ್ಮಡಿ "ಕೆಂಪವೀರ ನೃಪತೇಃ" ಸೋಮೇಶ್ವರ ಸ್ಥಾಪಕೋ |
ಜಿಯಾತ್ಸಜ್ಜನಪಾಲನಾಯ ರಚಿತಃ ಕ್ಷೇಮಾಗ್ರಹಾರಂ ಶ್ಚಿರಂ |

(ಮಾಗಡಿ ಶ್ರೀ|| ಶ್ರೀನಿವಾಸಯ್ಯಂಗಾರರಲ್ಲಿರುವ ದಾನಪತ್ರದ ನಕಲು)

೩೫) ಶಕ ೧೬೩೪ (ಅಲ್ಲ. ೧೬೩೫)ನೆಯ (ಕ್ರಿ. ಶ. ೧೭೧೩) ವಿಜಯ ಸಂವತ್ಸರ ವೈಶಾಖ ಶುದ್ಧ ೧೦ರಲ್ಲಿ ಮಾಗಡಿ ಸೋಮೇಶ್ವರ ದೇವಾಲಯದ ಉಪಯೋಗಕ್ಕಾಗಿ "**ಉದ್ದುರಳನಹಳ್ಳಿ**" ಯನ್ನು ದಾನಮಾಡಿದಾಗ ಬರೆದ

ದಾನಪತ್ರದಲ್ಲಿ ಹಿಂದಿನ ವಂಶವೃತ್ತಾಂತವೂ ಈ ಹಿಂದಿನ ಶಾಸನದ ಸ್ತುತಿ ಪದ್ಯವೂ ಬರೆದಿರುತ್ತದೆ.

ಮಾಗಡಿ ನಂ ೩

೩೬) ಶಕ ೧೬೩೪ (ಅಲ್ಲ ೧೬೩೫) ನೆಯ ವಿಜಯ ಸಂವತ್ಸರ (ಕ್ರಿ.ಶ. ೧೭೧೩) ವೈಶಾಖ ಶುದ್ಧ ೧೦ರಲ್ಲಿ ಚಿಕ್ಕದೇವರಾಜಗಿರಿ (ಹುತ್ರಿದುರ್ಗ)ಗೆ ಹತ್ತಿರದ ಕುಣಿಗಿಲು ತಾಲ್ಲೂಕು ಬೆಟ್ಟಹಳ್ಳಿ ಮಠಕ್ಕೆ "ಎಲಚವಾಡಿ" ಬಳಿಯಲ್ಲಿ ಭೂದಾನ ಮಾಡಿದಾಗಲೂ ಇದೇ ಪ್ರವರವನ್ನು ಹೇಳಿರುತ್ತಾನೆ–

(ಬೆಟ್ಟಹಳ್ಳಿಮಠದ ಶ್ರೀ।।ಗಳಾದ ಶ್ರೀ।। ನೀಲಕಂಠ ಶಿವಾಚಾರ್ಯ ರವರಲ್ಲಿರುವ ದಾನಪತ್ರದ ನಕಲು)

೩೭) ಶಕ ೧೬೩೫ನೆಯ ವಿಜಯ (ಕ್ರಿ. ಶ. ೧೭೧೩) ಸಂವತ್ಸರ ಶ್ರಾವಣ ಶುದ್ಧ ೧೦ ಈ ದಿನ ಮಾಗಡಿ ಹತ್ತಿರದ "**ಚನ್ನಮ್ಮಾಜಿಯವರ ಮಠ**" (ಜಡೆವಡೆಯರ ಮಠ) ಕ್ಕೆ ಶಿವಯೋಗಿ ಅಣ್ಣಾಜಿ ಹುಚ್ಚಣ್ಣನ ವಶಕ್ಕೆ ಭೂದಾನ ಮಾಡಿದ ದಾನ ಶಾಸನದಲ್ಲಿಯೂ ಪ್ರವರವನ್ನು ಹೀಗೆಯೇ ಹೇಳಿ ಕೊಂಡಿದ್ದಾನೆ.

(ಮಾಗಡಿಯಲ್ಲಿರುವ ಶ್ರೀ ಸಿ. ಆರ್. ರಂಗೇಗೌಡರಿಂದ ಬಂದ ಶಾಸನದ ನಕಲು)

೩೮) ಶಕ. ೧೬೩೪ (ಅಲ್ಲ ೧೬೩೫) ವಿಜಯ ಸಂವತ್ಸರ **ಮಾಘ** ಶುದ್ಧ ೭ ರಲ್ಲಿ (ಕ್ರಿ. ಶ. ೧೭೧೩) ಮೈಸೂರಿನಲ್ಲಿ ಒಂದನೆಯ ಕೃಷ್ಣರಾಜನು ಆಳುತ್ತಿದ್ದಾಗ (ಕ್ರಿ. ಶ. ೧೭೧೪–೧೭೩೨) ಅವನಿಗೆ ಕಿಂಕರರಾಗಿದ್ದ, "**ಜವರಯ್ಯ, ದೇವರಾಜಯ್ಯ**"ರೆಂಬ ಸೇರ್ವೆಗಾರರು (ಮೊದಲು ಕೆಂಪ ವೀರಪ್ಪಗೌಡನ ಪ್ರಧಾನ ರಾಜಧಾನಿಗಳಾಗಿದ್ದ. ಸಾವನದುರ್ಗದ, "**ನೆಲೆ ಪಟ್ಟಣ**" ದೇವರಾಜಗಿರಿಯ, **ಹುತ್ರಿದುರ್ಗದ** ನಗರ ರಕ್ಷಕರಾಗಿದ್ದರು). ಹಿಂದೆ ಹೇಳಿರುವ ಬೆಟ್ಟಹಳ್ಳಿಯ ಮಠಕ್ಕೆ ಕೆಲಕಾಣಿಕೆಯನ್ನು ದಾನಮಾಡಿರುತ್ತಾರೆ. ಈ ದಾನ ಶಾಸನದಲ್ಲಿವರು ಮೈಸೂರು ಒಂದನೆಯ ಕೃಷ್ಣರಾಜನ ಪರಂಪರೆಯನ್ನು ಸ್ತುತಿಸಿರುತ್ತಾರೆ—

(ಬೆಟ್ಟಹಳ್ಳಿ ಮಠದ ಶ್ರೀಗಳಲ್ಲಿರುವ ಶಾಸನದ ನಕಲು)

ಈ ದಾನಪತ್ರದಂತೆ ಕೆಂಪವೀರಪ್ಪಗೌಡನು ಇದರ ಹಿಂದಿನ ಶಾಸನ ಕಾಲವಾದ ಶಕ. ೧೬೩೫ನೆಯ ವಿಜಯ ಸಂವತ್ಸರ, ಶ್ರಾವಣ ಶುದ್ಧ ೧೦ ರಿಂದ ಇದೇ ವರ್ಷ ಮಾಘಶುದ್ಧ ೭ ರೊಳಗಾಗಿ ರಾಜ್ಯಾಧಿಕಾರದ ಸ್ವಾತಂತ್ರ್ಯ ವನ್ನು ಕಳೆದುಕೊಂಡಿರಬೇಕೆಂದು ತಾನಾಗಿಯೇ ಗೊತ್ತಾಗುವುದು. ಈ ಮುಂದೆ ಕೆಂಪವೀರಪ್ಪಗೌಡನು, ಮೈಸೂರಿನ ಒಂದನೆಯ ಕೃಷ್ಣರಾಜನಿಗೆ ಅಧೀನನಾಗಿದ್ದಂತೆ ಮುಂದಿನ ಶಾಸನವು ತಿಳಿಸುವುದು—

೩೯) ಶಕ ೧೬೩೫ ನೆಯ (ಅಲ್ಲ ೧೬೩೬)ನೆಯ ಜಯನಾಮ ಸಂವತ್ಸರ (ಕ್ರಿ. ಶ. ೧೭೧೪) ಶ್ರಾವಣಶುದ್ಧ ೧೧ ರಲ್ಲಿ, ಇದೇ ಕೆಂಪವೀರಪ್ಪ ಗೌಡನು ಮೈಸೂರಿನ ಒಂದನೆಯ ಕೃಷ್ಣರಾಜನಿಗೆ ಅಧೀನನೆಂದು ಹೇಳಿ ಕೊಂಡು ಹಿಂದಿನ ಬೆಟ್ಟಹಳ್ಳಿ ಮಠದ ಶಿವಯೋಗಿ-ಅಣ್ಣಾಜಿ ಹುಚ್ಚಣ್ಣನಿಗೆ ಭೂದಾನ ಮಾಡಿದಾಗ ಹೇಳಿಕೊಂಡ ಪ್ರವರದಲ್ಲಿ-

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರವುಢಪ್ರತಾಪ್ಪ, ವೀರನರಪತ್ತಿ ಮಯ ಯದುಕುಲ ಪಾರಾವಾರ ಪೂರ್ನಸುಧಾಕಾ (ಕ) ರ ಬಿರುದಂತ್ತೆಂಬು ವರ ಗಂಡ ಶ್ರೀವೀರ ಪ್ರತಾಪ ಮೈಸೂರು ಕ್ರುಷ್ಣರಾಜ ವಡೆಯರವರು ಶ್ರೀರಂಗಪಟ್ಟಣದಲು ರತ್ನಶಿಂಹಾಸನಾರೂಡರಾಗಿ ಸುಖದಿಂ ಪೃತವಿ ಸಾಂಬ್ರಾಜಂ ಗೈವುತ್ತಿರಲು -

ನಂಮ ಪ್ರಿಯದ ಭಕ್ತರಾದ :ಸದಾಶಿವಗೋತ್ರರಾದ ಯಲವಂಕನಾಡು ಪ್ರಭುಗಳಾದ ಮುಂಮುಡಿ ಕೆಂಪೇಗೌಡರವರ ಪೌತ್ರರಾದ ಮುಂಮುಡಿ ದೊಡ್ಡವೀರಪ್ಪಗವುಡರ ಪುತ್ರರಾದ ಮುಂಮುಡಿ ಕೆಂಪವೀರಪ್ಪಗವುಡರು-

(ಬೆಟ್ಟಹಳ್ಳಿ ಶ್ರೀಗಳಲ್ಲಿರುವ ಶಾಸನದ ನಕಲು)

೪೦) ಶಕ ೧೬೩೪ (ಅಲ್ಲ ೧೬೩೭) ನೆಯ ಮನ್ಮಥ ಸಂವತ್ಸರ (ಕ್ರಿ. ಶ. ೧೭೧೫) ವೈಶಾಖ ಬ|| ರಲ್ಲಿ ಮಾಗಡಿ ಸೋಮೇಶ್ವರ ದೇವಾಲಯದ ಸೇವೆಗಳಿಗಾಗಿ ದಾನಮಾಡಿದ ಮಾಗಡಿ ಸೋಮೇಶ್ವರ ದೇವಾಲಯದ ಗರ್ಭ ಗೃಹದ ದಕ್ಷಿಣದ ಗೋಡೆಯ ಶಿಲಾಶಾಸನದಲ್ಲಿ ಇದೇ ಕೆಂಪವೀರಪ್ಪಗೌಡನು ಮೈಸೂರಿನ ಒಂದನೆಯ ಕೃಷ್ಣರಾಜನ ಹಂಗುತೊರೆದು ಸ್ವತಂತ್ರನಾಗಿ "**ಮಹಾ ಮಂಡಲೇಶ್ವರ**"ನೆಂಬ ಬಿರುದಿನೊಡನೆ ಹೀಗೆ ಹೇಳಿಕೊಂಡಿರು ತ್ತಾನೆ ಈ ಶಾಸನದಲ್ಲಿ -

ಸ್ವಸ್ತಿ ಮಹಾ ಮಂಡಲೇಶ್ವರ..........ವಂಸ.......ಸವಗೆ...........
ಸದಾಶಿವ ಗೋತ್ರ ಗ....ಯಲಹಜ್ಞ (ಂಕ) ನಾಡ ಪ್ರಭುಗಳಾದ ಮುಂಮುಡಿ
ಕೆಂಪವೀರ ಪ್ರಭುಗಳ ಪೌತ್ರರಾದ...........[ದೊಡ್ಡವೀರಪ್ರಭುಗಳ] ಪುತ್ರ
ರಾದಸ - ಭವನಾಗ ಮುಂಮುಡಿ ಕೆಂಪವೀರಪಗೌಡರವರು ಬರಶಿಕೊಟ
ಶಿಲಾಶಾಸನಾ -

ಬೆಂಗಳೂರು ಸಪ್ಲಿಮೆಂಟ್ ನಂ. ೯೧

ಶಕ ೧೬೩೬ರಲ್ಲಿ ಒಂದು ವರ್ಷ ಕಾಲದಷ್ಟು ಮೈಸೂರಿನ ಒಂದನೆಯ ಕೃಷ್ಣರಾಜನ ಅಂಕಿತವನ್ನು ಒಪ್ಪಿದ್ದ ಕೆಂಪವೀರಪ್ಪಗೌಡನು ಮೂರನೆಯ ವರ್ಷವೇ ಶಕ ೧೬೩೭ರಲ್ಲಿ ಈ ಕೃಷ್ಣರಾಜನ ಹಂಗುತೊರೆದು ಸ್ವತಂತ್ರನಾಗಿ "ಮಹಾಮಂಡಲೇಶ್ವರ"ನೆಂದು ಆಳತೊಡಗಿದನೆಂದು ಈ ಶಿಲಾಶಾಸನದಿಂದ ಗೊತ್ತಾಗುವುದು-

೪೧) ಶಕ ೧೬೩೭ ನೆಯ (ಕ್ರಿ. ಶ. ೧೭೧೫) ಮನ್ಮಥನಾಮ ಸಂವತ್ಸರ ವೈಶಾಖ ಬ|| ೭ರಲ್ಲಿ ಇದೇ ಕೆಂಪವೀರಪ್ಪಗೌಡನು ಮಾಗಡಿ ಸೋಮೇಶ್ವರ ದೇವಸ್ಥಾನದಲ್ಲಿ ಕೆಲವು ದಾನಗಳನ್ನು ಮಾಡುತ್ತಾ ಹೀಗೆ ಹೇಳಿಕೊಂಡಿರುತ್ತಾನೆ -

ಯಲಹಂಕನಾಡು ಪ್ರಭುಗಳಾದ ಮುಂಮುಡಿ ಕೆಂಪೇಗವುಡರ ಪೌತ್ರರಾದ
ಮುಂಮುಡಿ ದೊಡ್ಡವೀರಗೌಡರ ಪುತ್ರರಾದ ಸತ್ಕುಲೋದ್ಯಕ (ಧ್ಭವ) ರಾದ
ಮಾಗಡಿ ಕೆಂಪವೀರಪ್ಪ ಗವುಡರವರು ಬರೆಶಿಕೊಟ್ಟ ಶಿಲಾಶಾಸನ-

(ಮಾಗಡಿಯಲ್ಲಿರುವ ಬಸವೇನಹಳ್ಳಿ ಶ್ರೀ|| ಮೂರ್ತಿಭಟ್ಟ
ರಲ್ಲಿದ್ದ ಶಾಸನದ ನಕಲು)

೪೨) ಶಕ ೧೬೬೦ (ಅಲ್ಲ ೧೬೫೮) ನಳ ಸಂವತ್ಸರ ಮಾಘಶುದ್ಧ ೧೪ರಲ್ಲಿ ಮೈಸೂರಿನಲ್ಲಿ ಕೃಷ್ಣರಾಜನು (ಇಮ್ಮಡಿ ಕೃಷ್ಣರಾಜ) ಆಳುತ್ತಿದ್ದಾಗ (ಕ್ರಿ. ಶ. ೧೭೩೪-೧೭೬೬) ಕಳಲೆ ನಂಜರಾಜನೆಂಬ ದಳವಾಯಿಯು ಕುಣಿಗಲು ತಾ|| ಬೆಟ್ಟಹಳ್ಳಿಮಠಕ್ಕೆ ಕೆಲವು ದಾನಗಳನ್ನು ಮಾಡಿರುತ್ತಾನೆ. ಈ ಕಾಲಕ್ಕೆ (ಕ್ರಿ. ಶ. ೧೭೩೬) ಮಾಗಡಿ ರಾಜ್ಯದ ಸೊಲ್ಲೇ ಅಡಗಿಹೋಗಿತ್ತು.

(ಬೆಟ್ಟಹಳ್ಳಿಮಠದ ಶ್ರೀಗಳವರಲ್ಲಿರುವ ದಾನಪತ್ರದ ನಕಲು)

## ಯಲಹಂಕ ವಂಶದವರ ಇತರ ಕೆಲವು ಶಾಸನಗಳು

೪೩) ಶಕ ೧೫೨೧ನೆಯ ವಿಕಾರಿನಾಮ ಸಂವತ್ಸರದ (ಕ್ರಿ. ಶ. ೧೫೯೯) ಜ್ಯೇಷ್ಠ ಬಹುಳ ೧೩ ಈ ದಿನ ಬರೆದ ಕುಣಿಗಿಲು ತಾ|| ಬೇಚರಾಕ್ ಕೃಷ್ಣ ಸಾಗರ ಗ್ರಾಮದ ಶಿಲಾಶಾಸನದಲ್ಲಿ ಇಮ್ಮಡಿ ಹಿರೀಕೆಂಪಯ್ಯಗೌಡನ ಪುಣ್ಯಸ್ತ್ರೀ (ಪತ್ನಿ) ಯಾದ "ವೆಂಕಟಕೃಷ್ಣಾಜಮ್ಮನು *

> ಚತುರ್ಥಗೋತ್ರದ ಯಲಹಂಕ ನಾಡಪ್ರಭು "ಯಿಂಮಡಿ ಹಿರೀ ಕೆಂಪ್ಪಯ್ಯ ಗೌಡರಯ್ಯನವರ ಪುಣ್ಯಸ್ತ್ರೀಗಳಾದ ವೇಂಕಟ ಕ್ರುಷ್ಣಾಜಮ್ಮನವರು ಮಾಡಿದ ಅಗ್ರಹಾರಕೆ ದಾನ-(ಎಂದೂ, ಇದರಲ್ಲಿ) "ನಂಮ ಮಾವ ಯಿಂಮಡಿ ಕೆಂಪೇಗೌಡರೈಯ"ನರವರಿಗು, ನಂಮ ಅತ್ತೆ" ಲಿಂಗಾಜಮ್ಮ ನವರಿಗು ಪುಣ್ಯವಾಗಲಿ ಯೆಂದು –
>
> ಕುಣಿಗಿಲು ನಂ. ೧೨

೪೪) ಕುಣಿಗಿಲು ತಾ|| ಶೃಂಗಾರ ಸಾಗರದ ಬಸವಣ್ಣನ ಗುಡಿ ಬಳಿ ಯಲ್ಲಿರುವ ಶಿಲಾ ಶಾಸನದಲ್ಲಿ ಇಮ್ಮಡಿ ಹಿರಿಕೆಂಪೇಗೌಡನ ಪಟ್ಟದ ನಾಟಕ ಶಾಲೆಯ "ಶೃಂಗಾರಮ್ಮನು "ದಾನ ಮಾಡುತ್ತಾ–

> ಶ್ರೀಮತು ಎಲ[ಹ]ಂಕ ನಾಡಪ್ರಭು ಯಿಂಮಡಿ ಕೆಂಪಯಗೌಡರವರ ಪಟದ ನಾಟಕ ಸಾಲೆಯ "ಶೃಂಗಾರೆಂಮನು" ಮಾಡಿದಂಥಾ "ಶೃಂಗಾರ ಸಾಗರದ ಅಗ್ರಹಾರದ ಗ್ರಾಮತಿ (ಕೆ) ಶುಭಮಸ್ತು–
>
> ಕುಣಿಗಿಲು ನಂ. ೨೯

೪೫) ಇದೇ ಕೆರೆ ಶೃಂಗಾರ ಸಾಗರದ ಕೆರೆ ಕಟ್ಟೆಕೆಳಗೆ ಬಿದ್ದಿರುವ ಶಿಲಾಶಾಸನದಲ್ಲಿಯೂ ಮೇಲಿನ ವಿವರವೆಲ್ಲವನ್ನೂ ಹೇಳಿ "ಶೃಂಗಾರಂಮ ನವರು ಕಟ್ಟಿಸಿದ ಕೆರೆ "ಎಂದು ಬರೆದಿದೆ–

೪೬) ಶಕ ೧೪೪೮ನೆಯ (ಕ್ರಿ. ಶ. ೧೫೬೭) ಪ್ರಭವ ಸಂ. ಆಶ್ವೀಜ ಬ|| ೧೦ರ ಶಾಸನದಲ್ಲಿ ಬೆಂಗಳೂರು ಜಿಲ್ಲೆ ನೆಲಮಂಗಲದ ತಾಲ್ಲೂಕು ಶಿವಗಂಗೆ ಗಂಗಾಧರ ದೇವಾಲಯದ ಗವಿಯಲ್ಲಿರುವ ಒಂದನೆಯ ಘಂಟೆಯ ಮೇಲೆ ಬರೆದಿರುವ ಬರೆಹದಲ್ಲಿ–

---

* ಈ ಶಾಸನದಲ್ಲಿ ಬರೆದಿರುವ ಶ. ೧೫೨೧ ರ ವಿಕಾರಿ ವರ್ಷವು ಶಕ ೧೫೮೧ರ ವಿಕಾರಿಯಾಗಿರಬಹುದು. ಇದು ಕ್ರಿ. ಶ. ೧೬೫೯ ಆಗುವುದು.

ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾ ಹನಶಕ ವರುಷ ೧೪೪೯ನೆಯ ಪ್ರಭವ ಸಂವತ್ಸರದ ಅಶ್ವೀಜ ಬ॥ ೧೦ ಸ್ಥಿರವಾಸರದಲ್ಲು ಶ್ರೀಮತು ಯೆಲಹಂಕನಾಡಪ್ರಭು ಸೊಣತಂಮೆಗೌಡರ ಮಕ್ಕಳು "ದುಟ್ಟನ ಹಳ್ಳಿಯ ಗಿರಿಯಪ್ಪಗೌಡ" — ಇತ್ಯಾದಿ.

ಬೆಂಗಳೂರು ಸಪ್ಲಿಮೆಂಟ್ ನೆಲಮಂಗಲ ನಂ. ೧೧೦

ಇಲ್ಲಿ ಹೆಸರು ಹೇಳಿರುವ ಹಿಂದಿನ ಶಾಸನ ನಂ. ೪೩ರ ವೆಂಕಟ ಕೃಷ್ಣಮ್ಮನು ಇಮ್ಮಡಿ ಕೆಂಪೇಗೌಡನ ಎರಡನೆಯ ಹೆಂಡತಿ "ಲಿಂಗಾಜಮ್ಮ"ನ ಮಗನಾದ ಇಮ್ಮಡಿ ಹಿರೀಕೆಂಪೇಗೌಡನ ಹೆಂಡತಿಯೆಂಬುದು ಇಲ್ಲಿ ಸ್ಪಷ್ಟ ವಾಗಿ ಹೇಳಿದೆ. ಇಮ್ಮಡಿ ಕೆಂಪೇಗೌಡನಿಗೆ "**ಕೆಂಪಮ್ಮ ಲಿಂಗಮ್ಮ**" ಎಂಬಿ ಬ್ಬರು ಹೆಂಡತಿಯರಿದ್ದರೆಂದೂ ಈ ಎರಡನೆಯ ಹೆಂಡತಿಯ ಮಗನು "ಇಮ್ಮಡಿ ಹಿರಿಯ ಕೆಂಪೇಗೌಡ" ನೆಂದೂ "**ವೀರಭದ್ರ ವಿಜಯ**"ದ ೪ನೆಯ ಉಲ್ಲಾಸ ದಲ್ಲಿ "**ಏಕಾಂಬರ ಶಾಸ್ತ್ರಿ**"ಯು (ಕ್ರಿ. ಶ. ಸು. ೧೬೪೫) ಬರೆದಿದ್ದಾನೆ. ಇಲ್ಲಿ ವೆಂಕಟಕೃಷ್ಣಮ್ಮನೆಂಬ ಒಕ್ಕಲು ಮಗಳು. ತಾನು ಮಾಡಿದ ಧರ್ಮಕಾರ್ಯದ ಸತ್ಫಲವನ್ನು ತನಗಾಗಲೀ ತನ್ನ ಗಂಡನಿಗಾಗಲೀ ಕೋರದೆ ತನ್ನ ಅತ್ತೆ-ಮಾವಂದಿರಿಗಾಗಿ ಕೋರಿಕೊಂಡಿರುತ್ತಾಳೆ. ಈ ಬಗೆಯ ಸೊಸೆಯರು ಲೋಕದಲ್ಲಿ ಎಲ್ಲ ಕಾಲಗಳಲ್ಲಿಯೂ ಬಹಳ ವಿರಳರಾಗಿರುವರು–ಈ ಕಾಲದಲ್ಲಿ ಮುಮ್ಮಡಿ ಕೆಂಪೇಗೌಡನಾಳುತ್ತಿದ್ದನು.

ಮತ್ತು ನಂ. ೪೬ರಲ್ಲಿ ಯಲಹಂಕನಾಡಪ್ರಭುವೆಂದು ಹೇಳಿಕೊಂಡಿ ರುವ "ಸೊಣತಮ್ಮೇಗೌಡನ ಮಗ ದುಟ್ಟನಹಳ್ಳಿಯ ಗಿರಿಯಪ್ಪಗೌಡಾದಿಗಳು ಇದೇ ಕಾಲದಲ್ಲಿ ಯಲಹಂಕನಾಡನ್ನು ಆಳುತ್ತಿದ್ದ. ಹಿರಿಯಕೆಂಪೇಗೌಡನ (ಕ್ರಿ. ಶ. ೧೫೩೧–೧೬೦೮) ಕಾಲದಲ್ಲಿ "ದುಟ್ಟನ ಹಳ್ಳಿ"ಯೆಂಬ ಅದಾವುದೋ ಊರಿನಲ್ಲಿದ್ದ ಹಿರಿಯ ಕೆಂಪೇಗೌಡನ ಜ್ಞಾತಿಬಾಂಧವರಾಗಿದ್ದು (ಕ್ರಿ. ಶ. ೧೫೬೭ ರಲ್ಲಿ ಈ ದಾನವನ್ನು ಮಾಡಿದ್ದಾರೆಂದು ತಿಳಿದುಕೊಳ್ಳಬಹುದು–

ಯಲಹಂಕನಾಡಿನ ಅರಸರಾಗಿದ್ದ "**ಮಾಗಡಿ ಗೌಡ ದೊರೆ**"ಗಳ ಕಾಲಮಾನ ವಂಶವೃತ್ತಾಂತಗಳನ್ನು ತಿಳಿದುಕೊಳ್ಳುವುದಕ್ಕಾಗಿ ಈ ಮೇಲೆ ಉದಹರಿಸಿದ ಶಾಸನ ಸಾಹಿತ್ಯವು ತುಂಬಾ ಉಪಯೋಗಕ್ಕೆ ಬರುವುದು. ಈ

ಶಾಸನಗಳ ಸಾಕ್ಷ್ಯದಂತೆ ಯಲಹಂಕನಾಡಿನ ಗೌಡದೊರೆಗಳ ವಂಶವೃಕ್ಷವನ್ನು ಹೀಗೆ ರಚಿಸಿ ತಿಳಿದುಕೊಳ್ಳಬಹುದು.

## ಯಲಹಂಕ ರಾಜವಂಶ, ಮತ್ತು ಕಾಲ

| | | |
|---|---|---|
| ೧) | ದೇಚರಸ | ಶಕ ೧೧೮೯–ಕ್ರಿ. ಶ. ೧೨೬೭ |
| ೨) | ಯಚಣ ಗೌಡ | ಶಕ ೧೨೫೦–ಕ್ರಿ. ಶ. ೧೩೨೮ |
| ೩) | ಬಯಿರೆದೇವ–ಮಾರಗೌಡ ಕನ್ನಗೌಡ | ಶಕ ೧೨೬೪–ಕ್ರಿ. ಶ. ೧೩೪೨ |
| ೪) | ಜಿಯ್ಯಪಗೌಡ | ಸು॥ ಕ್ರಿ. ಶ. ೧೩೪೨–೧೪೦೦ ? |
| ೫) | ಗಿಡ್ಡಪ್ಪಗೌಡ | ಸು॥ ಕ್ರಿ. ಶ. ೧೪೦೦–೧೪೫೦ ? |
| ೬) | ನಾಚಪ್ಪಗೌಡ | ಸು॥ ಕ್ರಿ. ಶ. ೧೪೫೦–೧೫೦೦ ? |
| ೭) | ಕೆಂಪನಾಚಪ್ಪಗೌಡ | ಸು॥ ಕ್ರಿ. ಶ. ೧೫೦೦–೧೫೩೧ ? |
| ೮) | ಹಿರಿಯ ಕೆಂಪೇಗೌಡ | ಕ್ರಿ. ಶ. ೧೫೩೧–೧೬೦೮ |
| ೯) | ಇಮ್ಮಡಿ ಕೆಂಪೇಗೌಡ | ಕ್ರಿ. ಶ. ೧೫೯೭–೧೬೫೬ |
| ೧೦) | ಮುಮ್ಮಡಿ ಕೆಂಪೇಗೌಡ | ಕ್ರಿ. ಶ. ೧೬೫೬–೧೬೮೧ |
| ೧೧) | ದೊಡ್ಡ ವೀರಪ್ಪಗೌಡ | ಕ್ರಿ. ಶ. ೧೬೮೧–೧೬೯೭ |
| ೧೨) | ಕೆಂಪವೀರಪ್ಪಗೌಡ | ಕ್ರಿ. ಶ. ೧೬೯೭–೧೭೧೬* |

ಏಕಾಂಬರ ಶಾಸ್ತ್ರಿಯು, "**ವೀರಭದ್ರವಿಜಯು**" ದಂತೆ (ಇವನು ಹಿರಿಯ ಕೆಂಪಭೂಪತಿಯಿಂದ) "**ಯಲಹಂಕ ವಂಶ**" ವೃಕ್ಷವನ್ನು ಹೇಳುವನು ಇದರಂತೆ "**ಯಲಹಂಕವಂಶದ ದೊರೆಗಳು**"–

---

* ಈ ವಂಶದ ರಾಜರಲ್ಲಿ ೮–೯–೧೦, ೧೧ ೧೨ನೆಯ ರಾಜರ ಕಾಲವನ್ನು ಅವರವರ ಶಾಸನಗಳ ಕಾಲವನ್ನು ಅನುಸರಿಸಿ ಮುಂದಿನ ರಾಜರ ಶಾಸನದ ಮೊದಲಿನವರೆಗೂ ಎಣಿಸಿದೆ. ಈ ನಡುಗಾಲದ ಯಾವುದಾದರೂ ಶಾಸನಗಳು ದೊರೆತರೆ ದೊರೆತಾಗ ಈ ಕಾಲವನ್ನು ಕೆಲವು ವರ್ಷಗಳಷ್ಟು ಹೆಚ್ಚು ಕಡಿಮೆ ಮಾಡಬಹುದು.

—"ಸಂಪಾದಕ"

೧) ಹಿರಿಯ ಕೆಂಪ ಭೂಪತಿ – (ಚನ್ನಮ್ಮ)
೨) ಇಮ್ಮಡಿ ಕೆಂಪೇಗೌಡ



(ಕೆಂಪಮ್ಮ) (ಲಿಂಗಮ್ಮ)

೩) ಮುಮ್ಮಡಿ ಕೆಂಪೇಗೌಡ–ಹಲಸಕ್ಷೀರರು ಇಮ್ಮಡಿ ಹಿರಿಯ ಕೆಂಪಗೌಡ



(ಬಸಮ್ಮ) (ತೋಟದಮ್ಮ) (ಬೈಯಮ್ಮ)
೪) ದೊಡ್ಡವೀರಪ್ಪಗೌಡ ಇಮ್ಮಡಿಕೆಂಪ, ಹಲಸ ಮುಮ್ಮಡಿ ಕೆಂಪ
(ಮುದ್ದುವೀರಮ್ಮ)
೫) ಕೆಂಪವೀರಪ್ಪಗೌಡ

ಯಲಹಂಕ ವಂಶದ ಗೌಡದೊರೆಗಳ ವೃತ್ತಾಂತವನ್ನು ತಿಳಿದುಕೊಳ್ಳುವುದಕ್ಕೆ ಈ ಕೆಳಗಿನ ಗ್ರಂಥಗಳು ಮುಖ್ಯವಾಗಿ ಉಪಯೋಗಕ್ಕೆ ಬರುವುವು –

| | |
|---|---|
| ೧) ಕೆಂಪೇಗೌಡನ ಜಯಪ್ರಶಸ್ತಿ | ಕ್ರಿ. ಶ. ೧೬೧೨–೧೬೩೪ |
| ೨) ಕಂಠೀರವ ನರಸರಾಜೇಂದ್ರ ವಿಜಯ | ಕ್ರಿ. ಶ. ೧೬೪೮ |
| ೩) ಚಿಕ್ಕದೇವ ರಾಜ ವಿಜಯ | ಕ್ರಿ. ಶ. ೧೬೭೩–೧೭೦೪ |
| ೪) ವೀರಭದ್ರವಿಜಯ | ಕ್ರಿ. ಶ. ೧೭೮೧–೧೭೯೭ |
| ೫) ಕಕುದ್ಗಿರಿ ಮಹಾತ್ಮ್ಯೆ | ಕ್ರಿ. ಶ. ೧೭೪೦ |
| ೬) ಮೈಸೂರು ರಾಜವಂಶಾವಳಿ | ಕ್ರಿ. ಶ. ೧೭೯೯–೧೮೦೦ |
| ೭) ನಿರಂಜನವಂಶ ರತ್ನಾಕರ | |
| ೮) ಚನ್ನಬಸವೇಶ್ವರ ಪುರಾಣ | ಕ್ರಿ. ಶ. ೧೬೮೫ ? |

ಇವುಗಳೇ ಅಲ್ಲದೆ ಇತರ ಹಲವು ಶಾಸನಗಳೂ ಉಪಯೋಗಕ್ಕೆ ಬರುವುವು. ಇಲ್ಲಿ ಅವುಗಳನ್ನೆಲ್ಲಾ ಸಾಂಗೋಪಾಂಗವಾಗಿ ಉಪಯೋಗಿಸಿಕೊಂಡಿರುವುದಿಲ್ಲ. ಉಪಯೋಗಿಸಿಕೊಂಡಿರುವವುಗಳನ್ನು ಈ ಮುಂದೆ ಅಲ್ಲಲ್ಲಿಗೇ ತಿಳಿಸಿದೆ.

## ಯಲಹಂಕ ವಂಶದ ಗೌಡದೊರೆಗಳ ಸಂಕ್ಷಿಪ್ತ ಚರಿತ್ರೆ

ಇದುವರೆಗೆ ಉದಹರಿಸಿರುವ "ಯಲಹಂಕ ವಂಶ" ದ ರಾಜರಲ್ಲಿ ಹಿರಿಯ ಕೆಂಪಭೂಪತಿಯಿಂದ ಹಿಂದಿನ **ದೇಚರಸ ಯಚಣಗೌಡ ಬಯಿರೆದೇವಾದಿ** ಗಳ ಜೀವನ ವೃತ್ತಾಂತವು ವಿವರವಾಗಿ ಇದುವರೆಗೆ ಗೊತ್ತಾಗಿಲ್ಲ. ಈ ವಂಶದ "**ಜಿಯ್ಯಪ್ಪ** "ನು ತುಮಕೂರು ಜಿಲ್ಲೆ ಕುಣಿಗಿಲು ಬಳಿ ಒಂದು **ಅಣೆಕಟ್ಟನ್ನು** ಕಟ್ಟಿಸಿದನೆಂದು ಹೇಳುತ್ತಾರೆ. ಈಗಲೂ ಈ ಅಣೆಕಟ್ಟನ್ನು "**ಜಿಯ್ಯಪ್ಪನ ಅಣೆ** "ಎಂದೇ ಕರೆಯುತ್ತಾರೆ. ಇನ್ನು ಮುಂದಿನ ಈ ವಂಶದ **ಗಿಡ್ಡಪ್ಪ-ನಾಚಪ್ಪ-ಕೆಂಪನಾಚಪ್ಪ**" ಇವರ ಸಲುವಾಗಿ ಹೆಚ್ಚು ಅಂಶಗಳು ಸಂಶೋಧನೆ ಯಾಗಿ ಹೊರ ಬಂದಿರುವುದಿಲ್ಲ. ಆದುದರಿಂದ "**ಹಿರಿಯ ಕೆಂಪ ಭೂಪತಿ**" ಯಿಂದ ಮೊದಲು ಮಾಡಿ ಈ ವಂಶದ ಚರಿತ್ರೆಯನ್ನು ಸಂಕ್ಷೇಪವಾಗಿ ಬರೆಯುವ ಪ್ರಯತ್ನ ಮಾಡಿದ್ದೇನೆ-

### ಹಿರಿಯ ಕೆಂಪೇಗೌಡ

ಈ ಗೌಡ ದೊರೆಗಳಲ್ಲಿ ಅದರಲ್ಲೂ "ಯಲಹಂಕ ವಂಶದ " ದೊರೆಗಳಲ್ಲಿ ಹಿರಿಯ ಕೆಂಪೇಗೌಡನ ಹಿಂದಿನವರ ಜೀವನ ವೃತ್ತಾಂತವನ್ನು ತಿಳಿಸುವ ಸಾಧನಗಳು ಶೀರಾ ಕಡಿಮೆಯಾಗಿವೆ. "ಏಕಾಂಬರ ಶಾಸ್ತ್ರಿ "ಯು ಬರೆದಿರುವ "**ವೀರಭದ್ರ ವಿಜಯ** "ದಲ್ಲಿ ಈ ಹಿರಿಯ ಕೆಂಪೇಗೌಡನ ಸಲುವಾಗಿ ಹೀಗೆ ಬರೆದಿದೆ-

ಯಲಹಂಕ ವಂಶನಾಮಾ ನೃಪವಂಶೋಸ್ತೀಹ ಯದ್ಭವಾ ಭೂಪಾಃ ।
"ಕರ್ಣಾಟರಾಜ್ಯ ಲಕ್ಷ್ಮೀ" ಕೋಟೀರ ನಿಬದ್ಧ ಮೌಕ್ತಿಕ ಪ್ರಖ್ಯಾಃ ॥
ತಸ್ಮಿನ್ನಾಸೀದಮಿತ ಮಹಿಮಾ "ಪೆದ್ದ ಕೆಂಪೇಂದ್ರನಾಮಾ" ।
ರಾಜಾ ರಾಜದ್ಗುಣ ಸಮುದಯೋ ರಮ್ಯಕೀರ್ತಿ ಪ್ರತಾಪಃ ॥
ಪ್ರತ್ಯಗ್ರಾಭಿರ್ವಿಶದ ರುಚಿಭಿರ್ಯದ್ಯಶೋ ಮಂಜರೀಭಿಃ ।
"ಕರ್ಣಾಟಾಂಧ್ರ ದ್ರವಿಡ ವನಿತಾಃ ಕರ್ಣಪೂರಾ ವ್ಯತನ್ವ ॥

ಹೀಗೆ ಯಲಹಂಕ ವಂಶದಲ್ಲಿ "ಕರ್ನಾಟರಾಜ್ಯ ಲಕ್ಷ್ಮಿ "ಯ ಮುಕ್ತಾ ಹಾರದಂತೆ ಈ ಭೂಪರಾದರೆಂದೂ ಈ ವಂಶದಲ್ಲಿ ಪೆದ್ದ (ಹಿರಿಯ) ಕೆಂಪನೆಂಬ

ದೊರೆಯು ಗುಣಾಢ್ಯನೂ ಕೀರ್ತಿಶಾಲಿಯೂ ಪರಾಕ್ರಮಿಯೂ ಆಗಿ ಹುಟ್ಟಿ ಬಂದನೆಂದೂ ಇವನ ಕೀರ್ತಿಯು "ಕನ್ನಡ-ತೆಲುಗು-ತಮಿಳು" ಹೆಣ್ಣು ಮಕ್ಕಳ ಕರ್ಣಾಭರಣದಂತೆ ಕಾಣಿಸುತ್ತಿದ್ದಿತೆಂದೂ ಹೇಳಿದೆ-

ಈತನ ಹೆಂಡತಿಯ ಹೆಸರು "ಚನ್ನಾಂಬೆ" ಯೆಂದು ಈ **ಜಯ** ಪ್ರಶಸ್ತಿಯ ಹಾಡುಗಳು ಭಾಗ ೧-೧೯ ರಲ್ಲಿಯೂ ಮತ್ತು ಹಾಡುಗಳು ಭಾಗ ೨-೧ ಮತ್ತು ೩೭ರಲ್ಲಿ ಈ ಇಮ್ಮಡಿ ಕೆಂಪೇಗೌಡನ ತಂದೆ ತಾಯಿಗಳ ಹೆಸರನ್ನು ಗುರುತು ಮಾಡುತ್ತಾ-

"ಯುಲಹಂಕ" ನಾಡೆರೆಯ ಮೋಹನ್ನರೂಪಾ।
ಸುಖದಿ ಸುಸ್ಥಿರಬಾಳು ಸುಪ್ರತಾಪಾ।
"ನಾಚಯ ಕೆಂಪ" ಧರಣೀಶನಣುಗ ಯಿಮ್ಮಡಿ ಕೆಂಪ ಭೂಪಾ ॥೧-೧೯

ಶ್ರೀಮ ತೆಲಹಂಕನಾಡ ವರ ಶಾಸನೋದ್ಧಾರಾ।
ಭೂಮೀಶ ಧೀರ "ಕೆಂಪೇಂದ್ರನ ಕುಮಾರಾ" । ಸಂ।
ಗ್ರಾಮ ಪಾರ್ಥಿವ ಯಿಮ್ಮಡಿ ಕೆಂಪದೊರೆರಾಯ ॥ ೨-೧

ಧರೆಯೊಳೆಲಹಂಕದ ನಾಡ ವರಶಾಸನೋದ್ಧಾರಾ।
ವರ ಕಕೋದ್ಗಿರಿ ಗಂಗೇಶನ ಭಕ್ತ ಮಂದಾರಾ।
"ಹಿರಿಯ ಕೆಂಪ ಭೂವರನ- ಚನ್ನಾಂಬೆ"ಯ ಕುಮಾರಾ ॥

ಎಂದು ಹೇಳಿರುವುದರಿಂದ ಇಮ್ಮಡಿ ಕೆಂಪೇಗೌಡನ **ತಾಯಿಯೂ** ಹಿರಿಯ ಕೆಂಪೇಗೌಡನ ಹೆಂಡತಿಯೂ ಆದವಳ ಹೆಸರು "ಚನ್ನಾಂಬೆ" **ಯೆಂದು** ಗೊತ್ತಾಗುವುದು. ಈ ಹಿರಿಯ ಕೆಂಪೇಗೌಡನು ಶಾಸನಗಳ ಆಧಾರದಂತೆ ಶಕ ೧೪೫೩ ರಿಂದ ೧೫೩೦ರವರೆಗೂ ಜೀವಿತನಾಗಿದ್ದನೆಂದು ಗೊತ್ತಾಗುವುದು.

ಇದು ಕ್ರಿ. ಶ. ೧೫೩೧-೧೬೦೮ಲ ಆಗುವುದು. ಈ ಹಿರಿಯ ಕೆಂಪೇಗೌಡನು ಕ್ರಿ. ಶ. ೧೫೩೧ ರಲ್ಲಿ ಬೆಂಗಳೂರು ತಾಲ್ಲೂಕು "ದಾಸನ ಪುರ" ದಲ್ಲಿ ಕೆಲದಾನ ಮಾಡಿದ್ದಾನೆ.

ಮತ್ತು ಕ್ರಿ. ಶ. ೧೫೬೬ರಲ್ಲಿ ರಾಜನಿಗೆ ಧರ್ಮವಾಗಲೆಂದು ಕುಣಿಗಿಲು ತಾಲ್ಲೂಕು ಕಸಬಾದಲ್ಲಿ ಕಸಪನಾಯಕ ಚಿಕ್ಕಲಿಂಗ ಹಿರಿಯಲಿಂಗಾದಿಗಳು ಕೆಲ ದಾನಗಳನ್ನು ಮಾಡಿದ್ದಾರೆ.

ಈ ಗೌಡನು ಕುಣಿಗಿಲು ತಾಲ್ಲೂಕು ಹೊಸೂರು ಗ್ರಾಮದಲ್ಲಿ ಕ್ರಿ. ಶ. ೧೫೮೫ ರಲ್ಲಿ-ಡಣಾಯಕನ ಪುರದ ಕುಮಾರದೇವರ ಕುಮಾರ "ಹಿರಿಯಯ್ಯ ದೇವ"ನಿಗೆ ಮಠಕ್ಕಾಗಿ ಕೆಲವು ದಾನ ಮಾಡಿದ್ದಾನೆ.

ಈ ಹಿರಿಯ ಕೆಂಪೇಗೌಡನಿಗೆ ಬಹಳ ಕಾಲ ಮಕ್ಕಳಾಗಿರಲಿಲ್ಲವೆಂದು ಕಾಣುತ್ತದೆ. ಇದೇ ರಾಜನು ತಾನು ಶಕ ೧೫೧೦ ಅಥವಾ ಕ್ರಿ. ಶ. ೧೫೮೮ರಲ್ಲಿ ಶಿವಗಂಗೆ ದೇವಾಲಯದ ಘಂಟೆಯ ಮೇಲೆ ಬರೆಸಿದ ಶಾಸನದಲ್ಲಿ-

ಶ್ರೀಮನ್ಮಹಾಯಲಹ[೦]ಕನಾಡಪ್ರಭು ಕೆಂಪನಾಚೇಗೌಡರ ಮಕ್ಕಳೂ ಕೆಂಪೇಗೌಡರೂ ತಮಗೆ ಪುತ್ರ ಪೌತ್ರ ಪಾರಂಪರೆಯಾಭಿವ್ರಿದ್ಧಿಯಾಗಲೆಂದು

ಎಂದು ಬರೆಸಿರುತ್ತಾನೆ. ಈ ಶಾಸನ ಬರೆದ ಶಕ ೧೫೧೦ (ಕ್ರಿ. ಶ. ೧೫೮೮) ರ ಹೊತ್ತಿಗೆ ಇವನು ಆಳತೊಡಗಿ ೫೫ ವರ್ಷಗಳಾಗಿದ್ದವು. ಬಹಳ ವರ್ಷಗಳು ಮಕ್ಕಳಿದ್ದಿರಲಿಲ್ಲದುದರಿಂದಲೋ ಏನೋ ಈ ಹಿರಿಯ ಕೆಂಪೇ ಗೌಡನು ಈ ದಾನಶಾಸನದಲ್ಲಿ "**ಪುತ್ರ ಪೌತ್ರಾಭಿವೃದ್ಧಿ**"ಯನ್ನು ಕೋರಿ ಕೊಂಡಿದ್ದಾನೆ. ಇಷ್ಟು ಹೊತ್ತಿಗೆ ಇಮ್ಮಡಿ ಕೆಂಪೇಗೌಡನು ಹುಟ್ಟಿದ್ದರೂ ಬಹಳ ಕಾಲಕ್ಕಾದ ತನ್ನ ಏಕಪುತ್ರನ ಮತ್ತು ಅವನ ಪೀಳಿಗದ ಶ್ರೇಯಸ್ಸನ್ನು ಬಯಸಿ ಈ ಹಿರಿಯ ಕೆಂಪರಸನು ಹೀಗೆ ಬರೆದಿರಿಸಿದ್ದರೂ ಇರಬಹುದು -

ಇನ್ನೂ ಇಪ್ಪತ್ತು ವರ್ಷಗಳಾದ ಮೇಲೆ ಶಿವಗಂಗೆ ಗಂಗಾಧರೇಶ್ವರ ಮಂದಿರದಲ್ಲಿ ಮಾಡಿಸಿಟ್ಟಿರುವ ಇವನ ವಿಗ್ರಹದ ಬುಡದಲ್ಲಿ ಬರೆದಿರುವ ಬರೆಹ ದಂತೆ-ಈತನು ಶಕ, ೧೫೩೦ (ಕ್ರಿ. ಶ. ೧೬೦೮) ರಲ್ಲೂ ಜೀವಿತನಾಗಿದ್ದ ನೆಂದು ಗೊತ್ತಾಗುವುದು. ಇಲ್ಲಿ ಗೌಡನು "**ಗಂಗಾಧರಸ್ವಾಮಿಯ ಪಾದಕೆ ಸದಾ ನಮಸ್ಕಾರ**"-ಎಂದು ಹೇಳಿಕೊಂಡು ತನ್ನ "ಪಾರಮಾರ್ಥಿಕ ಜೀವನ ಪ್ರೇಮ"ವನ್ನು ವ್ಯಕ್ತಪಡಿಸಿರುತ್ತಾನೆ. ಇಲ್ಲಿಗೆ ಇವನಾಳತೊಡಗಿ ೭೫ ವರ್ಷಗಳಾಗಿದ್ದವು. ಇವನು ರಾಜಗದ್ದುಗೆಯೇರಿದಾಗ ಇವನಿಗೆ ೨೦ ವರ್ಷ ಗಳಾಗಿದ್ದವೆಂದು ಹಿಡಿದರೂ, ಈ ಸಮಯಕ್ಕಿವನಿಗೆ ೯೫ ವರ್ಷಗಳಾಗಿದ್ದ ವೆಂದು ಕಾಣುತ್ತದೆ. ಇವನಾಳಿಕೆಯಲ್ಲಿ ಇವನ ಅಧಿರಾಜರಾದ ವಿಜಯ ನಗರದವರಲ್ಲಿ ಹಲವು ಜನಗಳಾಗಿ ಹೋದರೆಂದು ಕಾಣುತ್ತದೆ. ಸರಿಸುಮಾ ರಾಗಿ. ಇವನಾಳಿಕೆ ಮೊದಲಾಗಿದ್ದಿರಬಹುದಾದ ಕ್ರಿ. ಶ. ೧೫೩೧ ರಿಂದ

೧೬೦೮ ರವರೆಗೆ ವಿಜಯನಗರದ ರಾಜಮನೆತನದವರಲ್ಲಿ ತುಳುಮನೆತನದ ಅಚ್ಯುತ ದೇವರಾಯನೂ (ಕ್ರಿ. ಶ. ೧೫೩೦-೧೫೪೨) ಸದಾಶಿವರಾಯನೂ (ಕ್ರಿ. ಶ. ೧೫೪೨-೧೫೫೮?) ಆಮೇಲೆ ಅರವೀಡು ಮನೆತನದ, ಅಳಿಯ ರಾಮರಾಯ ವೆಂಕಟಾದ್ರಿಗಳೂ (ಕ್ರಿ. ಶ. ೧೫೫೮-೭೨?) ರಂಗ ಅಥವಾ ಶ್ರೀರಂಗರಾಯನೂ (ಕ್ರಿ. ಶ. ೧೫೭೨-೭೫) ಕಡೆಗೆ ಇದೇ ಮನೆತನದ "**ವೆಂಕಟರಾಯ**"ನ ಆಳಿಕೆಯೂ ಸಾಗುತ್ತಿತ್ತು ಈ ವೆಂಕಟಪತಿರಾಯನ ಆಳಿಕೆಯ (ಕ್ರಿ. ಶ. ೧೫೮೫-೧೬೧೮) ಮೊದಮೊಲಿನ ದಿನಗಳಲ್ಲಿ ಈ ಹಿರಿಯ ಕೆಂಪೇಗೌಡನು ಬದುಕಿದ್ದು. ಸುಮಾರು ಕ್ರಿ. ಶ. ೧೬೦೮ ರಲ್ಲಿ ಗತಿಸಿರ ಬಹುದೆಂದು ಊಹಿಸುವುದಕ್ಕೆ ಕಾರಣವಿದೆ:

## ಜಯಪ್ರಶಸ್ತಿಯ ಕಥಾನಾಯಕ ಇಮ್ಮಡಿ ಕೆಂಪೇಗೌಡ

ತಂದೆಯಾದ, ಹಿರಿಯ ಕೆಂಪೇಗೌಡನು ಜೀವಂತನಾಗಿದ್ದಾಗಲೇ, ಇಮ್ಮಡಿ ಕೆಂಪೇಗೌಡನು ರಾಜಗದ್ದುಗೆಯನ್ನೇರಿದ್ದನೆಂದು ಧಾರಾಳವಾಗಿ ತಿಳಿದುಕೊಳ್ಳಬಹುದು. ಈ ರಾಜನು ಶಕ ೧೫೪೯ ರಲ್ಲಿ (ಕ್ರಿ. ಶ. ೧೫೯೭) ರಲ್ಲಿ ಬೆಂಗಳೂರು ಪುರೋಹಿತದ ಹಕ್ಕನ್ನು "ವೇದಟ್ಲ ಅನಂತಭಟ್ಟ"ನಿಗೆ ದಾನ ಮಾಡಿದ ಶಾಸನಾಧಾರವಿದೆ. ಈತನ ತಂದೆಯು ಶಿವಗಂಗೆ ಶಾಸನದಲ್ಲಿ ಈ ಹಿಂದೆ ಉದಹರಿಸಿರುವಂತೆ, ಶಕ ೧೫೧೧ ರಲ್ಲಿ "ಪುತ್ರ, ಪೌತ್ರಾಭಿವೃದ್ಧಿ" ಯನ್ನು ಬೇಡಿಕೊಂಡಿರುವುದರಿಂದ ಈ ಮೊದಲೇ ಇವನು ಹುಟ್ಟಿದ್ದು. ಮಕ್ಕಳನ್ನು ಕಳೆದುಕೊಂಡಿದ್ದ ಅಥವಾ ಮಕ್ಕಳಿಲ್ಲದೆ ಬಲುದಿನಕ್ಕಾದ, ಮಗನ ಶ್ರೇಯಸ್ಸನ್ನು ಕೋರುವಾಗ ಇವನ ತಂದೆಯಾದ ಹಿರಿಯ ಕೆಂಪೇಗೌಡನು "**ಪೌತ್ರಾಭಿವೃದ್ಧಿ**" ಯನ್ನೂ ಬೇಡಿಕೊಂಡಿದ್ದಾನೆ. ಇದನ್ನೆಲ್ಲವನ್ನೂ ನೋಡಿದರೆ ಇಮ್ಮುಡಿ ಕೆಂಪೇಗೌಡನು, ಶಕ ೧೫೦೦ ರಲ್ಲಿ ಹುಟ್ಟಿದ್ದಿರಲೂ ಬಹುದೆಂದು ಸರಿ ಸುಮಾರಾಗಿ ಉಹಿಸಬಹುದಾಗಿದೆ.

೧) ಕುಲದೀಪಕನೂ ಈ ಜಯಪ್ರಶಸ್ತಿಯ ಕಥಾನಾಯಕನೂ ಆದ ಇಮ್ಮುಡಿ ಕೆಂಪೇಗೌಡನು ಮೊದಲಾಗಿ ಮಾಡಿದ ಕಾರ್ಯವೆಂದರೆ ಈಗಿನ "ಬೆಂಗಳೂರು ನಗರ"ವು ಒಂದಾನೊಂದು ಕಾಲದಲ್ಲಿ ವಿಪುಲವಾಗಿ ಬೆಳೆಯುವುದೆಂಬುದನ್ನು ಗುರ್ತಿಸಿದ್ದು. ಹೇಗೋ ಒಂದು ರೀತಿಯಿಂದ ಆಗಿನ ಭವಿಷ್ಯಜ್ಞರ

ಸಹಾಯದಿಂದ ಬೆಂಗಳೂರು ಹೆಚ್ಚಿ ಬೆಳೆಯುವುದನ್ನು ಊಹಿಸಿ ಇದರ ಎಲ್ಲೆಯನ್ನು "ನಾಲ್ಕು ಗೋಪುರ" ಗಳ ಮೂಲಕ ನಿಷ್ಕರ್ಷಿಸಿದ್ದು.

ಇದೇ ಜಯಪ್ರಶಸ್ತಿಯ ಕಡೆಗೆ, ಮುದ್ರಿಸಿರುವ ಇಮ್ಮಡಿ ಕೆಂಪೇಗೌಡನ ಬೆಂಗಳೂರು ಪೌರೋಹಿತ್ಯದ ದಾನಶಾಸನದಿಂದ ಇದರ ಮೇಲೆ ನೇರವಾದ ಬೆಳಕು ಬೀಳುವುದು. ಈಗ ಬೆಂಗಳೂರಿನಲ್ಲಿ ಉಳಿದಿರುವ ಕೋಟೆಗೆ ಹೊಂದಿಸಿ ಕಟ್ಟುವಾಗಲೇ ಜೋಡಿಸಿರುವ "ಹೊಯ್ಸಳರ ಲಾಂಛನ"ವಾದ, ಸಳನು-ಹುಲಿಯನ್ನು ತಿವಿದು ಕೆಡವುತ್ತಿರುವ ವಿಗ್ರಹವನ್ನು ನೋಡಿದರೆ ಈ ಕೋಟೆಯು ಹೊಯ್ಸಳರ ಆಡಳಿತದಲ್ಲಿ ಕಟ್ಟಲ್ಪಟ್ಟಿದ್ದಿರಬೇಕೆಂದು ಯಾರಿಗಾದರೂ ಗೊತ್ತಾಗುವುದು.

ಶಕ ೧೧೯೮ ರಲ್ಲಿ ಹೊಯ್ಸಳ ನರಸಿಂಹದೇವನಾಳಿಕೆಯಲ್ಲಿ "**ಯಲಹಂಕ**"ದ ನೆಲೆವೀಡಿ ನಲ್ಲಾಳುತ್ತಿದ್ದ. ಮಹಾಮಂಡಲೇಶ್ವರ "**ದೇಚರಸ**"ನು ಈ ಬೆಂಗಳೂರು ಕೋಟೆಯನ್ನು ಕಟ್ಟಿಸಿದ್ದಿರಬಹುದೆಂದು, ಗೊತ್ತಾಗುವುದು. ಈ ಕೋಟೆಯು ಇಮ್ಮಡಿ ಕೆಂಪೇಗೌಡನ ತಂದೆಯಾದ ಹಿರಿಕೆಂಪೇಗೌಡನಿಗಿಂತಲೂ ಬಹಳ ಹಿಂದಿನಿಂದಲೂ ಇತ್ತು. ಇದರ ಹಳೆಯ ಹೆಸರು "**ದೇವರಾಯಪಟ್ಟಣ**"ವೆಂದೂ ಇದರ ಪ್ರತಿನಾಮವು "**ಬೆಂಗಳೂರೆಂದೂ**" ಇದರ ಹಳೆಯ ಪುರೋಹಿತನಾದ ಅನಂತಭಟ್ಟನು ತನಗೆ ಮುಂದೆ ಬೆಳೆಯುವ ಈ ಬೆಂಗಳೂರಿನ ಪೌರೋಹಿತ್ಯದ ಹಕ್ಕನ್ನು ನೆಲೆಗೊಳಿಸಿ ಉಳಿಸಿಕೊಡಬೇಕೆಂದು ಇಮ್ಮಡಿ ಕೆಂಪೇಗೌಡನನ್ನು ಕೇಳಿಕೊಂಡನೆಂದೂ, ಆಗ ಗೌಡನು ಒಂದು ದಾನಪತ್ರದ ಮೂಲಕ—

> ಈ ಬೆಂಗಳೂರು ಕಸಬೆ ವಳಗೆ ಇರುವ ದೇಶದವರು ಮುಂತಾದ ಹದಿನೆಂಟು ಪಣಸ್ಥರ ಪುರೋಹಿತವನ್ನು ಮುಂದೆ ಈ ಗ್ರಾಮ ವೃದ್ಧಿಯಾಗತಕ್ಕ ಬಗ್ಗೆ "ಯಂತ್ರೋದ್ಧಾರಣೆ" ಮಾಡಿ ಚತುರ್ದಿಕ್ಕಿನಲ್ಲಿಯೂ "ಶಿಖರಗಳನ್ನು ಕಟ್ಟಿಸಿ" ಎಲ್ಲೆ ಕಟ್ಟು ನಿಬಂಧನೆ ಮಾಡಿ ಇರುವ ವರಿವಿಗುನ್ನೂ ಈ ಪುರೋಹಿತ ವಿಶಿಷ್ಟವನ್ನೂ ನಿಮಗೆ ಸಲ್ಲತಕ್ಕದೆಂದು –

ಬರೆಸಿಕೊಟ್ಟ ಶಾಸನದ ನಕಲನ್ನು ಈ ಜಯಪ್ರಶಸ್ತಿಯೊಡನೆ ಇದ್ದಕ್ಕಿದ್ದಂತೆ ಈ ಮುಂದೆ ಮುದ್ರಿಸಿದೆ (ಪುಟ ೩೦) ಇದರಂತೆ ಬೆಂಗಳೂರಿನ

ಸಂಬಂಧವಾದ ಕಟ್ಟುಕಥೆಗಳು ಹೇಗೆ ಸಂಗತವಾದವುಗಳಲ್ಲವೆಂಬುದು ಯಾರಿಗಾದರೂ ಗೊತ್ತಾಗುವುದು.

ಈ ಇಮ್ಮಡಿ ಕೆಂಪೇಗೌಡನು ಇದ್ದ ದೇವರಾಯ ಪಟ್ಟಣವನ್ನು ಬೆಂಗಳೂರೆಂದು ಕರೆದು, ಈ ಊರು ಮುಂದೆ ಉದ್ದಗಲವಾಗಿ ಬೆಳೆಯುವುದೆಂದು ನಿರೀಕ್ಷಿಸಿ, ಇದು ಅವನ ಕಲ್ಪನೆಯಲ್ಲಿ ಎಷ್ಟು ಬೆಳೆದೀತೆಂಬುದನ್ನು ತೋರಿಸಲು ನಾಲ್ಕು ದಿಕ್ಕುಗಳಲ್ಲಿಯೂ ನಾಲ್ಕು ಗಡಿಯ ಗೋಪುರಗಳನ್ನು ಕಟ್ಟಿಸಿದನು. ಇದೇ ಇವನು ಮಾಡಿದ ಮಹಾಕಾರ್ಯದಲ್ಲಿ ಮೊದಲಿನದು. ಅವನ ಕನಸಿನ ನಗರದ ಕಲ್ಪನೆಯು ಇಂದು ನೆನಸಾಗಿ ನಮ್ಮದುರಿಗೆ ಶೋಭಾಯಮಾನವಾಗಿ ನಿಂತಿದೆ—

೨) ಈ ಜಯಪ್ರಶಸ್ತಿಯ ಪ್ರಥಮಭಾಗದ ಕಾಲವಾದ ಶಕ ೧೫೩೪ನೆಯ ಪರಿಧಾವಿಯ ಸಂವತ್ಸರದಲ್ಲಿ ನಡೆದ ಘಟನೆಗಳನ್ನು ಈ ಪ್ರಶಸ್ತಿಯಲ್ಲಿ ಹೀಗೆ ಹೇಳಿ ತಿಳಿಸಿರುತ್ತದೆ. ಇದರಂತೆ—

ವಿಜಯನಗರದಲ್ಲಿ "**ವೆಂಕಟಪತಿರಾಯ**"ನಾಳುತ್ತಿದ್ದನು. ಆಗ ಈ ಇಮ್ಮಡಿ ಕೆಂಪೇಗೌಡನು "**ಚಿಕ್ಕದೊರೆ**"ಯೆಂದು ಹೆಸರುವಾಸಿಯಾಗಿದ್ದನು. ಆಗ "**ಅಯ್ಯಮಗೌಡ**"ನೆಂಬಾತನು ಹಿಂದು ಮುಂದು ನೋಡದೆ ಇವನ ಮೇಲೆ ಯುದ್ಧಕ್ಕೆ ಬಂದನು. ಮೊದಲು ಸಾರಿಗೇ ಇಮ್ಮಡಿ ಕೆಂಪೇಗೌಡನು ಅವನ ಕಡೆಯವರನ್ನು ಮಗ್ಗಲುಮುರಿದು ಓಡಿಸಿ ಆ "ಅಯ್ಯಮಗೌಡ"ನೇ ಮೊದಲಾದ ಹಲವರನ್ನು ಕಾಳಗದ ಕಣದಲ್ಲೇ ತರಿದು ಹಾಕಿಬಿಟ್ಟನು, ಈ ಜಯದಿಂದ ಇಮ್ಮಡಿ ಕೆಂಪೇಗೌಡನ ಕೀರ್ತಿಯೂ ನೂರ್ಮಡಿಯಾಗಿ ಬೆಳೆಯಿತು—

ಬಳಿಕ ಅಸೂಯೆಗೊಂಡ, ಪಾಳೆಯಗಾರರು ಇವನ ಮೇಲೆ ಬೀಳುವುದಕ್ಕೆ ಸಿದ್ಧರಾದರು. ಇವರಲ್ಲಿ—"ಅನಂತರಾಜ, ಮಾಕರಾಜ, ಯಾಚಮನಾಯಕ, ಜಗ್ಗರಾಜ, ಜಗದೇವರಾಯ, ತಿಮ್ಮೇಂದ್ರ, ಸೀರ್ಯದ ರಂಗಪ್ಪ, ಇಮ್ಮಡಿಬೈರ, ಪಟ್ಟದ ದಳವಾಯಿ, ಚುಂಚಣ್ಣ"—ಇವರು ಪ್ರಮುಖರಾದವರು. ಇಮ್ಮಡಿ ಕೆಂಪೇಗೌಡನು ಈ ಮೇಲುಬಿದ್ದ ಕೇಡಿಗರನ್ನು ಎದುರಿಸಿ ಹಿಮ್ಮೆಟ್ಟಿಸಿದನು ಮತ್ತು ಅನೇಕರನ್ನು ತರಿದು ಹಾಕಿದನು. ಈ ಜಯದಿಂದ ಇಮ್ಮಡಿ ಕೆಂಪೇಗೌಡನ ಕೀರ್ತಿಯು ಸಾಸಿರ ಮಡಿಯಾಗಿ ನಾಲ್ಕು ಕಡಲಿ

ನವರೆಗೂ ಬೆಳೆದು ಬೆಳಕಾಯಿಃತು-ಈ ಕಾಳಗದಲ್ಲಿ ಇಮ್ಮಡಿ ಕೆಂಪೇಗೌಡನ ವಿಜಯಗಾಥೆಯನ್ನು-ಚೆಂಜಿ, ಮಧುರೆ, ತಂಜಾವೂರು, ಬೇಲೂರು, ಚಂದ್ರ ಗಿರಿ, ಚನ್ನಪಟ್ಟಣ, ಶ್ರೀರಂಗಪುರ, ನಂಜರಾಯಪಟ್ಟಣ, ಬೇಲೂರು, ಪಿರಿಯಪಟ್ಟಣ, ಸೋದೆ, ಸೊನ್ನಲಾಪುರ, ಜಡೆಯಯಿಕ್ಕೆ (?) ಮೇಳಿಗೆ (?) ಬಂಕಾಪುರ ಹಾನುಗಲ್ಲು, ರಾಯಚೂರು, ವಿಜಯಪುರ, ಡಿಳ್ಳಿ, ಕಾಶಿ, ರಾಮೇಶ್ವರ "-ಇಲ್ಲೆಲ್ಲಾ ಹಾಡಿ ಹೊಗಳಿದರೆಂದು, ಈ ಪ್ರಶಸ್ತಿಯಲ್ಲಿ ಕವಿಯು ಮೈದುಂಬಿ ಹಾಡಿ ಹೊಗಳಿದ್ದಾನೆ.

ಈ ಘಟನೆಯು ಇವನಾಳಿಕೆಯ ಹದಿನೈದನೆಯ ವರ್ಷವಾದ ಶಕ ೧೫೩೪ನೆಯ ಪರೀಧಾವಿ ವರ್ಷದೊಳಗಾಗಿ ಆದದ್ದೆಂಬುದನ್ನು ಈ ಪ್ರಶಸ್ತಿಯು ತಿಳಿಸುವುದು. ಈ ಕಾಲದಲ್ಲಿ ವಿಜಯ ನಗರದಲ್ಲಿ ವೆಂಕಟಪತಿರಾಜನ ಆಳಿಕೆಯೂ (ಕ್ರಿ. ಶ. ೧೫೮೬-೧೬೧೮) ಇತ್ತು. ಐತಿಹಾಸಿಕ ದೃಷ್ಟಿಯಿಂದ ಈ ಸಂಗತಿಯು ನಂಬಿಕೆಗೆ ಅರ್ಹವಾಗಿದೆ.

೩) ಇಮ್ಮಡಿ ಕೆಂಪೇಗೌಡನು ಪಡೆದ ಈ ದಿಗ್ವಿಜಯವನ್ನು ಕೇಳಿ ಆಸೂಯೆಗೊಂಡ "ಶ್ರೀರಂಗಪಟ್ಟಣ"ದ ರಾಜನಾಗಿದ್ದ "**ಶ್ರೀರಂಗರಾಯ**" ನು (ಕ್ರಿ ಶ ೧೫೭೮-೧೬೧೦) ಇಮ್ಮಡಿ ಕೆಂಪೇಗೌಡನನ್ನು ಕೆಣಕಿ ಅವನ ರಾಜ್ಯದ ಮೇಲೆರಗಿದನು ಗೌಡನು ಅವನ ಬಲಶಾಲಿಯಾಗಿದ್ದ ದಂಡನ್ನು ಹಾರು ಹೊಡೆದು ಸೋಲಿಸಿದ್ದಲ್ಲದೆ ಅವನ ಆನೆ-ಕುದುರೆಗಳನ್ನೆಲ್ಲಾ ಸೆಳೆದು ಕೊಂಡನು. ಈ ಯುದ್ಧದಲ್ಲಿ ಎಲ್ಲವನ್ನೂ ಕಳೆದುಕೊಂಡು ದುರ್ಬಲನಾಗಿದ್ದ ಶ್ರೀರಂಗರಾಯನನ್ನು ಆಗ ಮೈಸೂರಿನ ರಾಜಮನೆತನದ "ಒಂದನೆಯ ರಾಜೊಡೆಯ" ನು ಆಕ್ರಮಿಸಿ ಅವನ ರಾಜಧಾನಿಯಾಗಿದ್ದ ಶ್ರೀರಂಗಪಟ್ಟಣವನ್ನು ಹಿಡಿದುಕೊಂಡು ಅದನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು.

ಒಂದನೆಯ ರಾಜೊಡೆಯನು ಕ್ರಿ ಶ ೧೫೭೮ ರಿಂದ ೧೬೧೭ ರವರೆಗೂ ಆಳಿದ ನಾದುದರಿಂದ ಈ ಕಾಲವೇ "ಶ್ರೀರಂಗರಾಯ"ನ ಆಳಿಕೆಯಾಗಿರಬೇಕು ಈ ರಾಜೋಡೆಯನು ಶ್ರೀರಂಗರಾಯನ ರಾಜಧಾನಿಯಾದ ಶ್ರೀರಂಗಪಟ್ಟಣ ವನ್ನು ಸರಿಸುಮಾರು ಕ್ರಿ ಶ ೧೫೧೫ ರಲ್ಲಿ ಹಿಡಿದು ಕೊಂಡಿರಬೇಕು ಇಮ್ಮಡಿ ಕೆಂಪೇಗೌಡನು ಈ ಶ್ರೀರಂಗರಾಯನ್ನು ಕಾಳಗದಲ್ಲಿ ಗೆದ್ದಿದ್ದಾದರೂ ಕ್ರಿ ಶ

೧೫೧೪ ರಲ್ಲಾಗಿರುವುದು ಹೆಚ್ಚು ಸಂಭವವಾಗಿರಬೇಕು ಈ ಕಾಳಗ ನಡೆದ ನೆಲ ಕಾಲ ಮೊದಲಾದ ಸಂಗತಿಗಳು ಸರಿಸರಿಯಾಗಿ ಗೊತ್ತಾಗಿರುವುದಿಲ್ಲ.

ಇಮ್ಮಡಿ ಕೆಂಪೇಗೌಡನು ಶ್ರೀರಂಗರಾಯನನ್ನು ಗೆದ್ದು ಅವನ ಆನೆ-ಕುದುರೆಗಳನ್ನೆಲ್ಲಾ ಸೆಳೆದು ತಂದ ವಿಜಯ ವೃತ್ತಾಂತವನ್ನು ಏಕಾಂಬರ ಶಾಸ್ತ್ರಿಯು ತನ್ನ "ವೀರಭದ್ರವಿಜಯ" ದ ೪ನೆಯ ಉಲ್ಲಾಸದಲ್ಲಿ ವಿವರಿಸಿರುತ್ತಾನೆ. ಇದು ಐತಿಹಸಿಕ ಸತ್ಯವಾದದ್ದೆಂದು ತಿಳಿದುಕೊಳ್ಳ ಬಹುದಾಗಿದೆ. ಇಮ್ಮಡಿ ಕೆಂಪೇಗೌಡನ ಈ ವಿಜಯವು ಈ ಜಯಪ್ರಶಸ್ತಿಯ ಮೊದಲನೆಯ ಭಾಗವು ರಚನೆಯಾದ ಮೇಲೆ (ಕ್ರಿ ಶ ೧೫೧೨) ಸುಮಾರು ೨ ವರ್ಷಗಳಲ್ಲಿ ಕ್ರಿ ಶ ೧೬೧೪ ರಲ್ಲಿ ನಡೆದದ್ದಾಗಿರ ಬಹುದೆಂದು ಇದರ ಕಾಲವನ್ನು ಊಹಿಸ ಬಹುದಾಗಿದೆ.

೩) ಇಮ್ಮಡಿ ಕೆಂಪೇಗೌಡನು ಈ ಯುದ್ಧ ಜಯವಾದ ೧೫ ವರ್ಷಗಳು ಸುಖವಾಗಿ ಆಳಿಕೊಂಡಿದ್ದು ಶಕ ೧೫೨೭ ರಲ್ಲಿ "ಸಂವತ್ಸರ ವ್ರತ"ವನ್ನು ಮಾಡಿ ೪೮ ಮಂದಿಗಳಿಗೆ "ಕೆಂಪಾಪುರ"ಅಗ್ರಹಾರವನ್ನು ದಾನಮಾಡಿದನು.–ಈ ದಾನ ಪಡೆದವರಲ್ಲಿ ೪೭ ಜನಗಳು ನಾನಾ ಗೋತ್ರ ಸಂಪ್ರದಾಯಗಳಿಗೆ ಸೇರಿದ ಬ್ರಾಹ್ಮಣರು. ಈ ಗುಂಪಿನಲ್ಲಿ ೪೫ನೆಯವನಾದ "ವೀರೇಶ"ನು ಒಕ್ಕಲು ಮಗನು. ಇವನು ಧರ್ಮವಿದನೆಂದೂ ಮಹಾ ವಿದ್ವಾಂಸನೆಂದೂ ಶ್ರೀರಂಗ ಪಟ್ಟಣದ ರಾಜಸಭೆಯಲ್ಲಿ ತನ್ನ ಶಾಸ್ತ್ರಜ್ಞಾನ ಪಾಂಡಿತ್ಯದಿಂದ ಎಲ್ಲರನ್ನೂ ಗೆದ್ದು ಮೆಚ್ಚಿಸಿದನೆಂದೂ ಇದೇ ಜಯಪ್ರಶಸ್ತಿಯ ಸಂಗಡ ಮುದ್ರಿಸಿರುವ ಕೆಂಪಾಪುರ ಅಗ್ರಹಾರದ ದಾನಶಾಸನದಿಂದ ಗೊತ್ತಾಗುವುದು, (ಪುಟ ೨೦–೨೫) ಈತನ ವಿಷಯವಾಗಿ ಇಲ್ಲಿ ಹೀಗೆ ಹೇಳಿದೆ–

ವೀರೇಶ ನಾಮಧೇಯಾಯ "ವಿಷ್ಣುಪಾದೋದ್ಭವಾಯ ಚ। "
"ತುರೀಯ್ಯ ಜಾತೀಯ" ಧರ್ಮ-- ವಿದೇ ರಾಜಾ ಭುವಂ ದದೌ ॥
ಅಂಶಸ್ತಥಾ ಚಭೂವೈಕಃ – ತಾದೃಗ್ದ್ವೇವಾರ್ಚನಾ ಪರಃ ।
ಶ್ರೀರಂಗ ಪತ್ತನೇ ರಾಜ್ಞಾಂ – ಅಗ್ರೇ ವಿದ್ವತ್ಸಭಾ ಮುಖೇ ।
ಎಡದ್ವಾ್ಗ್ರಮು ಬುಧೈಸ್ಸಾಕಂ – ಅನುವಾದ್ಯೇಕ ವತ್ಸರಂ ।
ನಿರ್ಜಿತ್ಯ ನಿಬಿಡಂ ತೋಷಂ – ಯಃ ಪ್ರಾಪ ಸಬುಧೋ ಧೃವಂ ॥

೪) ಇದೇ ಶಕ ೧೫೨೭ ರಲ್ಲಿಯೇ ಇಮ್ಮಡಿ ಕೆಂಪೇಗೌಡನು "ಐವರ

ಗಂಡಪುರ" ವನ್ನು ೪೮ ವೃತ್ತಿಗಳಾಗಿ ಮಾಡಿ ೪೮ ಮಂದಿ ಬ್ರಾಹ್ಮಣರಿಗೆ ದಾನಮಾಡಿದನು. ಈ ವಿಸ್ತಾರವಾದ ಶಾಸನದ ಮೊದಲಿಗೇ-

"ಮಾಗಡಿ ಕೆಂಪೇಗವುಡರಯನವರು" ಯೀ ಅಗ್ರಹಾರ ಮಾಡಿದು ಶಾಲಿವಾಹನ ಶಕ ೧೫೨೭ ವಿಶ್ವಾವಸು ನಾಮ ಸಂವತ್ಸರ ಚೈತ್ರ ಶುದ್ಧ ೧೫ ಸೋಮೋಪರಾಗ ಪರ್ವದಲ್ಲಿ "ಹಲಸೂರ್ರು ಸೋಮೆಶ್ವರಸ್ವಾಮಿ ಸನ್ನಿಧಾನ ದಲ್ಲೂ ಧಾರಾಗ್ರಹಿತವಾಗಿ ಕೊಟಂತ್ಥಾ ವೃತ್ತಿಗಳು ೪೮ಕ್ಕೆ ವಿವರ್ರಾ"—

ಎಂದು ಹೇಳಿ ಈ ದಾನವನ್ನು ಹಲಸೂರು ಸೋಮೇಶ್ವರ ದೇವರ ಸನ್ನಿಧಾನದಲ್ಲಿ ಮಾಡಿರುತ್ತಾನೆ. ಆ ಮೇಲೆ ಶಕ. ೧೫೪೯ ರಲ್ಲಿ (ಕ್ರಿ. ಶ. ೧೬೦೭) ರಲ್ಲಿ ಮಾಗಡಿ ಸೋಮೇಶ್ವರದೇವಾಲಯಕ್ಕೆ "ಹಂಚಿಕುಪ್ಪ ಮೋತ (ಮತ್ತ ?) ಅತ್ತಿಮಿಗೆರೆ ಕೆಂಪಾಪುರಗಳನ್ನು ದಾನಮಾಡಿದನು-

೫) ಇದಾದ ಮೇಲೆ ಕಲ್ಯಾಣದ ಬಸವ ಪರಂಪರೆಯ ೨೨ ನೆಯ ಗುರುಗಳಾದ "ಗಗನದಾರ್ಯ" ರೆಂಬ ಗುರುಗಳು ಸಂಚರಿಸುತ್ತ ಮಾಗಡಿಗೆ ಬಂದರು. ಗೌಡನು ಆ ಗುರುವಿನಲ್ಲಿ ಭಕ್ತಿಯನ್ನು ಪ್ರಕಟಪಡಿಸಿ ಆತನಿಗೆ ಶಿಷ್ಯನಾಗಿ "**ಲಿಂಗಧಾರಣೆ**" ಮಾಡಿಸಿ ಕೊಂಡನೆಂದೂ ಮಾಗಡಿ ಅಕ್ಕ ಪಕ್ಕಗಳಲ್ಲಿ ೬೬ ವಿರಕ್ತ ಮಠಗಳು ರಚನೆಯಾದವೆಂದೂ ಈ ಗೌಡನು ಈ ಗುರುವಿಗೆ ಪರಮ ಭಕ್ತನಾಗಿದ್ದನೆಂದೂ "**ನಿರಂಜನವಂಶ ರತ್ನಾಕರ**" ವೆಂಬ ಗ್ರಂಥದಲ್ಲಿ ಬರೆದಿದೆ. ಈ ಗುರುವು ಮಾಗಡಿ ಹತ್ತಿರವಿರುವ "**ಬೈರನ ದುರ್ಗ**" ದಲ್ಲಿ ಮುಕ್ತನಾದನೆಂದೂ, ಇವನ ಗದ್ದುಗೆಯು ಬೈರನ ದುರ್ಗದಲ್ಲಿದೆಯೆಂದೂ ಇದೇ ಗ್ರಂಥದಲ್ಲಿ ವಿಶದವಾಗಿ ವಿವರಿಸಿದೆ. ಈ ಗ್ರಂಥದಲ್ಲಿರುವ ಕೆಲವು ವಾಕ್ಯಗಳು ಹೀಗಿರುತ್ತವೆ –

"............ ದೇಶರಗಳಂ ಸಂಚರಿಸುತ್ತ "**ಶಿವಗಂಗೆ**" ಪ್ರಾಂತದಲ್ಲಿ ಇರುವ "**ಮಾಗಡಿಪಟ್ಟಣ**"ಕ್ಕೆ ಚಿತ್ತೈಸಿ ಆ ಊರ ಅರಸನಾದ "**ಸಾಡಗೌಡ**"ನಿಗೆ ಶಾಸ್ತ್ರಮುಖದಿಂದ ಒಡಂಬಡಿಸಿ "**ಲಿಂಗಧಾರಣವಂ ಮಾಡಿಸಿ**" ಅವನ ಭಕ್ತನಂ ಮಾಡಿಕೊಂಡು ಇವರು ಆ ಪಟ್ಟಣದಲ್ಲಿ ೬೬ ವಿರಕ್ತ ಮಠಗಳನ್ನು ಆ ಊರ ಭಕ್ತರ ಭಕ್ತಿಯಿಂದ ಕಟ್ಟಿಸಿ ............ ಆ ಊರ ರಾಜನನ್ನು ಕೃತಾರ್ಥನಂ ಮಾಡಿ" –ಇತ್ಯಾದಿ–

ನಿರಂಜನ ವಂಶರತ್ನಾಕರ ಪುಟ ೫೮

ಈ ಹೇಳಿಕೆಯಂತೆ ಈಗಲೂ ಮಾಗಡಿ ಊರ ಸುತ್ತಲೂ ಹಲವಾರು ವೀರಶೈವ ಮಠಗಳು ತುಂಬಿವೆ. ಮಾಗಡಿಯ ಅಕ್ಕಪಕ್ಕಗಳಲ್ಲಿಯೂ ಹಲವಾರು ಮಠಗಳಿವೆ. ಹಲವು ಊರ್ಜಿತಸ್ಥಿತಿಯಲ್ಲಿಯೂ ಇವೆ. ಈ ಮಠಗಳಲ್ಲಿ ಈಗ ಊರ್ಜಿತಸ್ಥಿತಿಯಲ್ಲಿಲ್ಲದಿದ್ದರೂ ಇಮ್ಮಡಿ ಕೆಂಪೇಗೌಡನ ನಿಜ ರಾಜಧಾನಿಯಾದ **ಮಾಗಡಿದುರ್ಗ** ಅಥವಾ **ಸಾವನದುರ್ಗದ** ಬಳಿಯಲ್ಲ ಒಂದು "**ಕಲ್ಯಾಣ ಒಡೆಯರ ಮಠ**" ವೆಂಬ ಪಾಳು ಮಠವಿದೆ. ಇದರ ಸಂಬಂಧಪಡೆದ ಗ್ರಾಮವನ್ನು ಈಗಲೂ "ಕಲ್ಯಾಣ ಒಡೆಯರ ಮಠ" ವೆಂಬ ಹೆಸರಿನಿಂದಲೇ ಕರೆಯುತ್ತಾರೆ. ಸರ್ಕಾರದ ಲೆಕ್ಕಗಳಲ್ಲಿಯೂ ಈ ಊರಿಗೆ ಇದೇ ಹೆಸರಿದೆ. ಈ ಎಲ್ಲಾ ಸಂಗತಿಗಳೂ ಹಿಂದಿನ ಹೇಳಿಕೆಯನ್ನು ಒಂದು ರೀತಿಯಿಂದ ದೃಢಪಡಿಸುವುವು-ಗೌಡನು "ಲಿಂಗಧಾರಿ" ಯಾಗಿದ್ದುದಕ್ಕೆ ಇತರ ಸಾಕ್ಷಿಗಳಿಲ್ಲ. ಈ ವಂಶದ ಅರಸರು ವೀರಶೈವ ಮಠಗಳಿಗೆ ದಾನ ದಕ್ಷಿಣೆಗಳನ್ನು ಕೊಟ್ಟು ಸಹಾಯಮಾಡಿರುತ್ತಾರೆ. ಈ ವಂಶದವರ ಶಾಸನ ಸಾಹಿತ್ಯದಿಂದಾಗಲೀ ಆ ಕಾಲದ ಪ್ರಾಮಾಣಿಕ ಗ್ರಂಥಗಳಿಂದಾಗಲೀ ಈ ವಂಶದವರು "ಲಿಂಗಧಾರಿ" ಗಳಾಗಿದ್ದರೆಂಬ ಸೂಚನೆಯೂ ಕಂಡು ಬಂದಿರುವುದಿಲ್ಲ.

ಈ ಘಟನೆಯನ್ನು ಅನುಸರಿಸಿ ಇಮ್ಮಡಿ ಕೆಂಪೇಗೌಡನು ಮುಂದೆ ತನ್ನ ಗೋತ್ರವನ್ನು "ಚತುರ್ಥಗೋತ್ರ" ವೆಂದಿದ್ದುದನ್ನು "ಸದಾಶಿವಗೋತ್ರ" ವೆಂದು ಹೇಳಿಕೊಳ್ಳತೊಡಗಿದನೆಂದು ಕಾಣುವುದು. ಪ್ರಸಿದ್ಧ ವೀರಶೈವ ಕವಿಯಾದ "ವಿರೂಪಾಕ್ಷ ಪಂಡಿತ"ನು ತನ್ನ "ಚನ್ನಬಸವ ಪುರಾಣ"ದಲ್ಲಿ, ಇಮ್ಮಡಿ ಕೆಂಪೇಗೌಡನ ಸಮಕಾಲಿಕರಾದ, ಬಿಜ್ಜಾವರದ ಚಿಕ್ಕಣ್ಣಗೌಡ-ಸುಗಟೂರು ತಮ್ಮಣ್ಣಗೌಡಾದಿಗಳೊಡನೆ, **ಉಡು** (ಯಲ) **ವಂಕದ** ದೊರೆಗಳು, ವೀರಶೈವ ಭಕ್ತರಾಗಿ ಜಂಗಮ ದಾಸೋಹ ಮಾಡುತ್ತಿದ್ದವರೆಂದು ಈ ಕೆಳಗಿನ ರಾಜರನ್ನು ಹೆಸರೆತ್ತಿ ಹೇಳಿದ್ದಾನೆ-

ಪರಮ ಜಂಗಮಕಿನ್ನು ದಾಸೋಹಮಂ ಮಾಳ್ಪ।
ದೊರೆಗಳಂ ಪೇಳ್ವೆನಾ ಸಂಜರಾಯಂ ಮುಂದೆ।
ನಿರುತದಿಂ ಕೆಂಚಸೋಮಣ್ಣ ನಾಯಕ ಯಳಂದೂರರಸು ಚನ್ನೊಡೆಯರು॥
ಬರಗಿಯಾ ದೇವಿನಾಯಕನು ಬುಕ್ಕಣ್ಣೊಡೆಯ।

ನಿರದಲ್ಲಿ ಸಿದಮಲ್ಲಿನಾಯಕಂ ಮತ್ತೆ ಶಿವ।
ಶರಣನಾ ಸಂಕಣ್ಣ ನಾಯಕಂ ಜಂಬೂರ ದಾನಿವಾಸದ ದೊರೆಗಳು ॥೫೫॥

ಕೇತ ಸಾಗರದ ಚಿಕ್ಕಣ ಶೆಟ್ಟಿಯಲ್ಲಿ ವಿ।
ಖ್ಯಾತಿ "ಬಿಜ್ಜಾವರದ ಪ್ರಭುವೆ ಚಿಕ್ಕಣಗೌಡ"।
ಸಾತಿಶಯದಿಂದೆ "ಸುಕುಟೂರ ತಮ್ಮಣಗೌಡ" ನೆಸೆವ ತಗಡೂರ ಪ್ರಭುವು॥
ಪ್ರೀತಿಯಿಂ ತಳಕಾಡ ಚಂದ್ರಶೇಖರ ನುರವ।
ದಾತನಾ ಭೋಗವಾಡಿಯ ಲಿಂಗರಾಯ ನತಿ।
ಭೂತಹಿತ "ನುಡು (ಯಲ) ವಂಕ ನಾಡಪ್ರಭು" ಮೊದಲಾಗಿ
ದಾಸೋಹಮಂ ಮಾಳ್ಪರು ॥ *

ಚನ್ನಬಸವ ಪುರಾಣ ಕಾಂಡ ೫ ಸಂಧಿ ೧೦-೫೫-೫೬

೬) ಈ ಮುಂದೆ ಜಯಪ್ರಶಸ್ತಿಯ ಎರಡನೆಯ ಭಾಗದ ಕಾಲವಾದ, ಶಕ ೧೫೫೬ ಅಥವಾ ಕ್ರಿ. ಶ. ೧೬೩೪ ರಲ್ಲಿ, ಇಮ್ಮಡಿ ಕೆಂಪೇಗೌಡನ ಜೀವನ ಕಾಲದ ಘಟನೆಗಳು ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಅದರಂತೆ-

ತನ್ನ ಅಧಿರಾಜನಾದ "ವೆಂಕಟಪತಿ" ಯ ರಾಜಧಾನಿಯಾದ "ಪೆನುಗೊಂಡೆ ದುರ್ಗ" ಕ್ಕೆ ಹಲವು ಮಂದಿ ಮುತ್ತಿಗೆ ಹಾಕಿದ್ದರೆಂದೂ ಅಧಿರಾಜನ ಬೇಡಿಕೆಯಂತೆ ಇಮ್ಮಡಿ ಕೆಂಪೇಗೌಡನು ತನ್ನ ಹಲವು ಸಹಾಯಕರಾದ ಅರಸರನ್ನು ಕೂಡಿಸಿಕೊಂಡು ಸಾಹಸದಿಂದ ಮುನ್ನುಗ್ಗಿ ಶತ್ರುಗಳನ್ನೆಲ್ಲಾ ಓಡಿಸಿ ವೆಂಕಟಪತಿರಾಜನನ್ನು ರಕ್ಷಿಸಿದನೆಂದೂ ತುಂಟಾಟವಾಡಿದ ಹಲವು ರಾಜರನ್ನು ಬಗ್ಗಿಸಿ ವೆಂಕಟಪತಿರಾಜನಿಗೆ ಶರಣು ಬರಿಸಿದನೆಂದೂ, ಈ ದಿಗ್ವಿಜಯದ ವೃತ್ತಾಂತವನ್ನು ಸುರಸವಾಗಿ ಮೈನವಿರೇಳುವಂತೆ ಇಲ್ಲಿ ವರ್ಣಿಸಿರುತ್ತದೆ. ಈ ಕಾಲದಲ್ಲಿ ಇಮ್ಮಡಿ ಕೆಂಪೇಗೌಡನಿಂದ ರಕ್ಷಿಸಲ್ಪಟ್ಟ ವೆಂಕಟಪತಿ ರಾಜನು ಹಿರಿಯ ವೆಂಕಟಪತಿರಾಜನ (ಕ್ರಿ. ಶ. ೧೫೮೬-೧೬೧೮) ಮಗನಾದ ಇಮ್ಮಡಿ ವೆಂಕಟಪತಿ ರಾಜನೆಂದು (ಕ್ರಿ. ಶ. ೧೬೩೯) ತಿಳಿದುಕೊಳ್ಳಬೇಕಾಗಿದೆ. ಈ ಜಯಪ್ರಶಸ್ತಿಯೇ ಎದುರಿಗಿರುವುದರಿಂದ ಇದರ ಸಲುವಾಗಿ ಹೆಚ್ಚು ವಿವರಣೆಯನ್ನು ಬರೆಯಲಿಲ್ಲ. ಈ ಜಯಪ್ರಶಸ್ತಿಯ ಎರಡನೆಯ

---

* ಕೆಲ ತಾಳೆಯೋಲೆ ಪ್ರತಿಗಳಲ್ಲಿ "ಭೂತಹಿತ ನೆಲವಂಕನಾಡ ಪ್ರಭು" ಎಂದೂ ಪಾಠಗಳಿವೆ. "ಸಂಪಾದಕ"

ಭಾಗವು ರಚನೆಯಾದ (ಕ್ರಿ. ಶ. ೧೬೩೪) ರಿಂದೀಚೆಯ ಈ ಕೆಂಪೇಗೌಡನ ಜೀವನ ವೃತ್ತಾಂತವು ಈ ಪ್ರಶಸ್ತಿಯಿಂದ ಗೊತ್ತಾಗುವುದಿಲ್ಲ.

ಈ ಕಾಲವಾದ ಕ್ರಿ. ಶ. ೧೬೩೪ ರಿಂದೀಚೆಗೆ ಇಮ್ಮಡಿ ಕೆಂಪೇಗೌಡನು ಕ್ರಿ. ಶ. ೧೬೫೬ ರ ವರೆಗೂ ಇದ್ದನೆಂದು ಗೊತ್ತಾಗುವುದರಿಂದ ಈತನ ಸಲುವಾಗಿ ಇತರ ಆಧಾರ ಮೂಲಗಳನ್ನು ಅವಲಂಬಿಸಿ ವಿಚಾರ ಮಾಡಬೇಕಾಗಿದೆ.

೭. ಶಕ ೧೫೭೦ (ಕ್ರಿ. ಶ. ೧೬೪೮)ನೆಯ ಸರ್ವಧಾರಿ ಸಂವತ್ಸರದಲ್ಲಿ ಬರೆದ "ಗೋವಿಂದ ವೈದ್ಯ "ನ "**ಕಂಠೀರವ ನರಸರಾಜೇಂದ್ರ ವಿಜಯ**"ದಲ್ಲಿ ಕಂಠೀರವ ನರಸರಾಜನ ತಂದೆಯಾದ "**ಬೆಟ್ಟದ ಚಾಮರಾಜ**" ನು **ಬೆಂಗಳೂರು ಬಳಲಾಪುರ ಕೋಳಾಲ** "ದ ರಾಜರನ್ನು ಕಂಗೆಡಿಸಿ ಓಡಿಸಿದನೆಂದು ಹೇಳಿದೆ. ಈ ಬೆಟ್ಟದ ಚಾಮರಾಜ (ಕ್ರಿ. ಶ. ೧೬೧೭-೧೬೩೭) ನೇ ಕಂಠೀರವ ನರಸರಾಜನ ತಂದೆ. ಈತನು ಬೆಂಗಳೂರ ಅರಸನನ್ನು ಭಂಗಿಸಿ ಓಡಿಸಿದ ಸಂಗತಿಯನ್ನು ಗೋವಿಂದ ವೈದ್ಯನು ಹೀಗೆ ಹೇಳುತ್ತಾನೆ–

ಬಳಲಾಪುರ ಬೆಂಗಳೂರು ಕೋಳಾಲದ। ಇಳೆಯಾಣ್ಮರುರೆ ಕಂಗೆಟ್ಟು ॥
ತಳತಂತ್ರವ ನೀಗೆ ತಮ್ಮಯ ಪುರಗಳ್ಗೆ । ತಳುವದೆ ಸರಿದರೇ ವೇಳ್ವೆ.॥೯೨॥

ಕಂಠೀರವ ನರಸರಾಜೇಂದ್ರ ವಿಜಯ
ಸಂ॥ ೩-೯೨

ಈ ಸಂಗತಿಯಲ್ಲಿ ಸತ್ಯಾಂಶವೆಷ್ಟಿದೆಯೋ ತಿಳಿಯದು. ಇದೇ ಚಾಮರಾಜನು ಶಕ ೧೫೪೨ರ ರೌದ್ರಿ ಮಾರ್ಗಶಿರ ಶು. ೧೫ರಲ್ಲಿ (ಕ್ರಿ. ಶ. ೧೬೨೦) ಶ್ರೀರಂಗಪಟ್ಟಣದ ತಾಲ್ಲೂಕು ಆನೇವಾಳದ ಚೌಡಮ್ಮನ ಗುಡಿ ಮುಂದಿನ ಶಾಸನದಲ್ಲಿ – ಆನೆವಾಳನ್ನು ದಾನಮಾಡುವಾಗ

ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ರಾಮದೇವ ಮಹಾರಾಯ ಯೊರೆವರು – ಆಳುತ್ತಿದ್ದಾಗ – ಮೈಸೂರ ನರಸರಾಜೊಡೆಯರ ಕೊಮಾರ ಚಾಮರಾಜೊಡೆಯರ ದಳವಾಯಿ ಚಾಮಪ್ಪನವರು —

ಶ್ರೀರಂಗಪಟ್ಟಣ ನಂ...........

ಎಂದು ಹೇಳಿಕೊಂಡಿದ್ದಾನೆ. ಇಮ್ಮಡಿ ಕೆಂಪೇಗೌಡನೂ ಈ ಚಾಮರಾಜನೂ ಇಬ್ಬರೂ ಶ್ರೀರಾಮದೇವನಂಕಿತದಲ್ಲೇ ಆಳುತ್ತಿದ್ದವರು. ಇದರ

ಸತ್ಯಾಂಶವು ಚಿಂತನೀಯವಾಗಿದೆ. ಒಂದು ವೇಳೆ ಇದರಲ್ಲಿ ಸ್ವಲ್ಪ ದಿಟವಿದ್ದರೂ ಇದೊಂದು ಸ್ಥಳೀಯ ಹೋರಾಟವೆಂದು ಹೇಳಬಹುದು. ಈ ಘಟನೆಯು ಚಾಮರಾಜನಾಳಿಕೆಯಾದ ಕ್ರಿ. ಶ. ೧೬೩೭ರ ಒಳಗಾಗಿ ಆದದ್ದೆಂದು ತೋರುವುದು.

ಲ) ಮುಂದೆ ಈ "ಕಂಠೀರವ ನರಸರಾಜ ವಿಜಯ" ದಲ್ಲಿ ಸಂಗತಿಗಳು ಹೀಗೆ ಹೇಳಿವೆ. ಇಕ್ಕೇರಿಯ ರಾಜನ ಮೇಲೆ ಮುನಿಸುಗೊಂಡು ಬಸವ ಪಟ್ಟಣದ ಹನುಮನು "**ವಿಜಯಾಪುರ**"ದ ಸುಲ್ತಾನನನ್ನು ಬರಮಾಡಿ ಕೊಂಡು ಇಕ್ಕೇರಿಯ ಮೇಲೆರಗಿದನೆಂದೂ-ಈ ಸೈನ್ಯದ ನಾಯಕನಾಗಿ "**ರಣಧೂಳಿಖಾನ**" (ರಣದುಲ್ಲಾಖಾ಼) ನು ಬಂದಿದ್ದನೆಂದೂ ಹೀಗೆ ಹೇಳುತ್ತಾನೆ –

ಧುರಗಲಿ ಹನುಮನ ಬಲ ಸಹಕರಿಸಿಕೊಂ । ಡಿರದಿಕ್ಕೇರಿಯ ದಳವ ॥
ಮುರಿಯಲಿರಿದು ಬೆನ್ನಟ್ಟಿ ಬಂದಾಕ್ಷಣ। ಪುರವ ಮುತ್ತಿದನಾ ಖಾನ॥ ೧೧-೪
ಬಸವಪಟ್ಟಣಕ್ಕೈದಿ ಪೂವಲ ಹನುಮನ। ನೊಸೆದು ಸ್ನೇಹವ ಮಾಡಿಕೊಂಡು॥
ಎಸೆವ ಕರ್ಣಾಟಕ ಬಲಗೂಡಿ ಖಳಬಹ। ಕುಶಲವನೇನ ಬಣ್ಣಿಸುವೆ॥

ಈ ದಂಡಿನೊಡನೆ ಹರಪನಹಳ್ಳಿ ಕನಕಗಿರಿ ಸೊಂಡೂರು ಉಜ್ಜನಿ (ಪ॥ ೧೧–೧೩) ರಾಯದುರ್ಗ ಪಟ್ಟೆಯ ವೀರಪ್ಪನಾಯಕ ದೊಡ್ಡೇರಿಯರಸ ಕುಂದುರುಪೆ (ಪ. ೧೪) ಹಿರಿಯೂರ ತಮ್ಮಣ್ಣ ನಾಯಕ (೧೫) ಚಿಕ್ಕನಾಯ್ಕನ ಹಳ್ಳಿ ಬೈರನಾಯಕ ತುರುಗೆರೆ ಹನುಮಪ್ಪ ನಾಯಕ (೧೬) ಬೇಲೂರು ನರಸಿಂಹಪುರ ಪಾಲುಪರೆ ಹನುಮಪ್ಪನಾಯಕ (೧೭) ಇವರೆಲ್ಲರೂ ಕೂಡಿ ಬಂದಿದ್ದರೆಂದೂ, ಇವರೆಲ್ಲರ ಈ ಬಲಗೂಡಿಬಂದ ರಣಧೂಳಿಖಾನನು "**ಮೊರಸುರಾಜ್ಯ**"ವನ್ನು ಕೆಡಸಿದದೆಂದು—

"ಮೊರಸು ರಾಜ್ಯವ" ಹೊಕ್ಕು ತುರುವನು ಸೆರೆವಿಡಿ।
ದಿರದೆ ಜನರ ಕಂಗೆಡಿಸಿ॥

ಶರಣು ಹೊಕ್ಕರಿಗೆ ನಂಬುಗೆಗೊಟ್ಟು ಮುಂದಕ್ಕೆ। ತೆರಳಿದನಾ ಖಾನ ನಾಗ
ಬೆಂಗಳೂರವನ ಪರಾಕ್ರಮುವನು ಬೇಗ। ಭಂಗಿಸಿಬಿಡುವೆನೆದೆನುತ॥

ಹಿಂಗದೆ ತಳತಂತ್ರ ಸಹಿತೈದಿ ನೆರೆ "ಶಿವ। ಗಂಗೆ" ಯೊಳಗೆ ಬೀಡಬಿಟ್ಟ।
ಕೇಳಿದನಾಗ ಖಾನನ ಧಾಳಿಯಬ್ಬರ। ದೇಳಿಗೆಯನು "ಬೆಂಗಳೂರ"॥

ಭೂಲೋಲ ದಳವ ಮೇಳೈಸಿಕೊಂಡನು ನೆರೆ ।
ಕಾಳಗವನು ಡೂಳ್ಪೆನೆಂದು ॥ ೫೮ ॥

ಈ ಯುದ್ಧದಲ್ಲಿ ಗೌಡನಿಗೆ ಸೋಲಾಯಿತೆಂದೂ ಕಂಗೆಟ್ಟ ಗೌಡನು ತನ್ನ ಮಗನನ್ನು ಕೈಸೆರೆಗಟ್ಟ ಆಯತಪ್ಪಿ ದುರ್ಗಗಳನ್ನು ಬಿಟ್ಟು ಕುಣಿಗಿಲ ಕಡೆಗೆ ಹೊರಟು ಹೋದನೆಂದೂ,

ಅನಿತರೊಳಗೆ ಕಂಗೆಟ್ಟು ಖಾನಗೆ ತನ್ನ । ತನುಜನ ಕೈಸೆರೆಗಟ್ಟ ॥
ಘನ ನಂಬುಗೆಗೊಂಡು ದುರ್ಗವ ನಿತ್ತಾಗ । ಮನನೊಂದು ತೆರಳಿದ
"ಗೌಡ" ॥ ೬೧ ॥

ರಾಮಗಿರಿಯ ದುರ್ಗ ಮೊದಲಾದ ಘನವಹ । ಸೀಮೆಯ ಖಳನಿಗೆ ಕೊಟ್ಟು ॥
ನೇಮವಳಿದು ನೆರೆಯುವನಿತ್ತ 'ಕುಣಿಗಿಲು। ಸೀಮೆಗೈದಿದನೇ ವೇಳ್ಪ ।೬೨।
ಕಂಠೀರವ ನರಸರಾಜ ವಿಜಯ ಸಂಧಿ ॥೧೧।

ಬೆಂಗಳೂರರಸನಾದ ಇಮ್ಮಡಿ ಕೆಂಪೇಗೌಡನು. ಈ ಧಾಳಿಯಾದ ಶ॥ ೧೫೬೧ ಅಥವಾ ಕ್ರಿ. ಶ. ೧೬೩೮-೯ಕ್ಕೆ ಮೊದಲೇ ತನ್ನ ರಾಜ್ಯವನ್ನು ಕಳೆದುಕೊಂಡು ಪರದೇಶಿಯಾದನು. "ಮೈಸೂರು ರಾಜವಂಶಾವಳಿ"ಯಲ್ಲಿ ರಣದುಲ್ಲಾಖಾನನು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದ ದಿನವನ್ನು ಶಕ ೧೫೬೧ ಎಂದೇ ಬರೆದಿದೆ. ಇಮ್ಮಡಿ ಕೆಂಪೇಗೌಡನ ಈ ಪರಾಭವವು ಶಕ ೧೫೬೧ ರಲ್ಲೇ ಆಗಿರಬಹುದು.

ಇಮ್ಮಡಿ ಕೆಂಪೇಗೌಡನು ಸೋತು "**ಕುಣಿಗಿಲು**" ಕಡೆಗೆ ಹೋದನೆಂದು "ಕಂಠೀರವ ನರಸರಾಜವಿಜಯ"ದಲ್ಲಿ ಹೇಳಿದೆ. ವೀರನಾದ ಇಮ್ಮಡಿ ಕೆಂಪೇಗೌಡನೇ ಸೋತು ಹಿಮ್ಮೆಟ್ಟದ ಮೇಲೆ, ಇವನಂಕಿತದಲ್ಲಿದ್ದ, "ಬಲ್ಲಾಳಪುರ, ಕೋಳಾಲ, ಬಿಜ್ಜಾವರ (೧೧-೬೩) ಚಿಕ್ಕಬಳಲಾಪುರ, ಹೊಳವನಹಳ್ಳಿ, ಹೊಸಕೋಟೆ, (೧೧-೬೪) ಬಾವಲೂರು, ಹೊಸವೂರು, ಕಗ್ಗೊಂದಿ, ಮಾಸ್ತಿ, ದೇವಂಡಪುರಿ, ಸೂರೆ(ಲಿ)ಬೆಲೆ, ಸಿಡಿಲ್ಗಟ್ಟ" (೧೧-೬೪,೫) ಈ ಪಾಳೆಯಗಾರರೆಲ್ಲರೂ ಹೆದರಿ, "ರಣದುಲ್ಲಾಖಾನ"ನಿಗೆ ಕಾಣಿಕೆಯಿತ್ತು ಅವನ ಅಧೀನರಾದರೆಂದು ಇಲ್ಲೇ ಹೇಳಿದೆ—

ಬಹುಬಲದೊಡನೆ ಶ್ರೀರಂಗಪಟ್ಟಣದ ಮೇಲೇರಿ ಹೋಗುತ್ತಿದ್ದ, ರಣದುಲ್ಲಾಖಾನನೊಡನೆ ಹಲವು ಮರಾಟಾ ಸರದಾರರ ಸೈನ್ಯಗಳೂ ಇದ್ದವು.

ಈ ಗ್ರಂಥದ ೧೨ನೆಯ ಸಂಧಿಯಲ್ಲಿ "**ಷಹಜಿ**" (ಪ ೪೫) ರಾಘವಪಂಡಿತ (ಪ. ೬೦) ವೇದೋಜಿ (ಪ ೬೧) ಮೊದಲಾದವರೂ ಕೂಡಿ ಸಾಗುತ್ತಿದ್ದರೆಂದು ಹೇಳಿದೆ. ಇವರಲ್ಲಿ "**ಷಹಜಿ**"ಯನ್ನು "**ಮಹಿಷಾಸುರ**" ನಂತಿದ್ದನೆಂದು ಈ ಗ್ರಂಥದಲ್ಲಿ ಹೀಗೆ ವರ್ಣಿಸಿದೆ—

ಮಹಿಷಾಸುರನಂತೆ ಬಹುವಾಜಿಗಳ ಸ। ನ್ನಹದೆ ಬರುವನಾರು ಮಂತ್ರಿ ।।
ವಿಹರಿಪ ನರನಾರಾಯಣ ಚಿತ್ತೈಸು । "ಷಹಜಿ"ಯೆನಿಸಿಕೊಳ್ಪನೀತ।।

೧೨–೪೫

ರಣದುಲ್ಲಾಖಾನನ, ಈ ಧಾಳಿಯಲ್ಲಿ ತನ್ನ ಮರಾಟಾ ಸೈನ್ಯದೊಡನೆ ಬಂದು ಸಹಾಯಕನಾಗಿದ್ದ ಷಹಜಿಗೆ, ವಿಜಾಪುರದ ಸುಲ್ತಾನನು "ಬೆಂಗಳೂರ"ನ್ನು ಬಳುವಳಿಯಾಗಿ ಕೊಡುವಂತೆ ಅಪ್ಪಣೆಮಾಡಿದನೆಂದೂ, ಅದರಂತೆ "ರಣದುಲ್ಲಾಖಾನ"ನು ಬೆಂಗಳೂರನ್ನು ಷಹಜಿಗೆ ಕೊಟ್ಟನೆಂದೂ, ಇಲ್ಲೇ ಹೀಗೆ ಹೇಳಿದೆ—

ಬಳಿಕಿತ್ತ ಪಾತ್ಸ್ಯಾವು ವಿನಪ್ಪಣೆಯಿಂದ । ತಳುವದೆ ಯಾ । "ಬೆಂಗಳೂರ"।।
ಗಳಿಲನೆ "ಷಹಜಿಗೆ ಕೊಟ್ಟ್ಯಾಗ" ಖಾನ ಮುಂ । ದೆಳಸಿದ ರಾಜಕಾರಿಯವ।

೧೨–೬೬

ಈ ಬಗೆಯಿಂದ ಇಮ್ಮಡಿ ಕೆಂಪೇಗೌಡನ ಅಕ್ಕರೆಯೂರಾದ ಬೆಂಗಳೂರನ್ನು ಷಹಜಿಯು ಆಳುವಂತಾಯಿತು. ಈ ಸಂಗತಿಯನ್ನು "ಚಿಕ್ಕದೇವರಾಜ ವಿಜಯ"ದಲ್ಲಿ (ಕ್ರಿ. ಶ. ೧೬೭೪–೧೭೦೪) ತಿರುಮಲಾರ್ಯನು ಬರೆಯುತ್ತಾ, ಈ ಧಾಳಿಕಾರರು ಬೆಂಗಳೂರನ್ನು ಕೊಂಡು "ಕೆಂಪೆಯಗೌಡ"ನನ್ನು ಹೊರ ಹೊರಡಿಸಿದರೆಂದು—

ಝೋಂಪಿಸಿ ಮುಂಬರಿದಾದುರ್ಝು ।
ಳಂಪಿಸಿ ಮೇಲ್ವಾಳ್ಗಳೊಡನೆ ಕಂಪಿಸೆ ಯೆರ್ದೆಯಂ ।।
"ಕೆಂಪೆಯ ಗೌಡ" ನೆನಿಪ್ಪನಿ ।
ತಂ ಪಚನಂ ಪೊಳಲನೀಳ್ದು ಪೊರಗಣ್ಗೊಗೆದಂ ।। ೯೯ ।।

ವಚನ ॥ ಆ ಬೆಂಗಳೂರಂ ಕೊಂಡು ಪಟ್ಟಣಮುಂ ಪತ್ತೆ ಸಾರುತ್ತಿದೆ ।।

ಚಿಕ್ಕದೇವರಾಜ ವಿಜಯ ಸಂಧಿ ।। ೨ ।।

ಈ ಸಮಕಾಲೀನವಾದ ಪ್ರಾಮಾಣಿಕ ಸಾಕ್ಷ್ಯದಂತೆ ಇಮ್ಮಡಿ ಕೆಂಪೇಗೌಡನು. ಶಕ ೧೫೬೧ ಅಥವಾ ಕ್ರಿ. ಶ. ೧೬೩೮ ರಲ್ಲಿ ರಾಜ್ಯವನ್ನು ಕಳೆದು ಕೊಂಡು ಪರದೇಶಿಯಾಗಿದ್ದನೆಂದು ಯಾರಿಗಾದರೂ ಗೊತ್ತಾಗುವುದು.

ಹೀಗಾಗಿ, ಇಮ್ಮಡಿ ಕೆಂಪೇಗೌಡನು ರಾಜ್ಯವನ್ನು ಕಳೆದುಕೊಂಡು, ಇದ್ದಾಗ ತಲೆಮರೆಸಿಕೊಂಡು ದೊಡ್ಡಬಳ್ಳಾಪುರದ ತಾಲ್ಲೂಕು "**ಬೆಳೆ ಮಂಗಲ**"ದಲ್ಲಿದ್ದ "**ಕರಣಿಕ ನಾರಣಪ್ಪ**"ನ ಮನೆಯಲ್ಲಿ ಆಳಿನಂತೆ ನೆಲಸಿದನು. ಕೆಲದಿನಗಳೊಳಗಾಗಿ, ನಾರಾಣಪ್ಪನಿಗೆ ತನ್ನ ಆಳಾಗಿದ್ದವನು ಇಮ್ಮಡಿ ಕೆಂಪೇಗೌಡನೆಂಬುದು ಗೊತ್ತಾಗಿ ಹೋಯಿತು. ಈ ನಾರಣಪ್ಪನು ತಾನು "ಬೆಳಮಂಗಲ"ದಿಂದ ಮಾಗಡಿಗೆ ಬಂದು, ಕೆಂಪೇಗೌಡನ ಸಹಾಯಕರನ್ನು ಗುಟ್ಟಾಗಿ ಕೂಡಿಸಿ, ಕಾಲಕಾದು, ಸೈನ್ಯಕಟ್ಟಿ ಕೆಂಪೇಗೌಡನನ್ನು ತಿರುಗಿ ರಾಜಗದ್ದುಗೆಗೇರಿಸಿದನು. ಈ ಘಟನೆಯು ಸರಿಸುಮಾರಾಗಿ ಕ್ರಿ. ಶ. ೧೬೪೦-೪೨ ರೊಳಗಾಗಿ ನಡೆದಿರಬಹುದು. ಜನಜನಿತವಾಗಿರುವ, ಮತ್ತು ಅನೇಕ ಜನಪದದ ಲಾವಣಿಗಳಲ್ಲಿ ಹೇಳಲ್ಪಡುತ್ತಿರುವ, ಈ ಪ್ರವಾದದಲ್ಲಿ ಐತಿಹಾಸಿಕ ಸತ್ಯಾಂಶವಿದೆಯೆಂದು ಯಾರಿಗಾದರೂ ಗೊತ್ತಾಗುವುದು-

೯) ಬೆಳಮಂಗಲದ "ನಾರಣಪ್ಪ"ನಿಗೆ ಇಮ್ಮಡಿ ಕೆಂಪೇಗೌಡನು ಸ್ಥಿರವಾಗಿ "ಮಂತ್ರಿಪದ"ವನ್ನು ಕೊಟ್ಟನು. ಆಮೇಲೆ ಇಮ್ಮಡಿ ಕೆಂಪೇಗೌಡನು, ತನ್ನ ಹಿರಿಯ ಹೆಂಡತಿ "**ಕೆಂಪಮ್ಮ**"ನ ಮಗನಾದ "**ಮುಮ್ಮಡಿ ಕೆಂಪೇಗೌಡ**"ನನ್ನು, ತನ್ನ ಸಂರಕ್ಷಕನೂ, ಮಂತ್ರಿಯೂ ಆಗಿದ್ದ ನಾರಣಪ್ಪನ ಬಳಿಯಲ್ಲಿ ಬಿಟ್ಟನು. ಮುಮ್ಮಡಿ ಕೆಂಪೇಗೌಡನೂ, ನಾರಣಪ್ಪನೂ ಅತಿ ಸಾಹಸಪಟ್ಟು, ಬೆಂಗಳೂರನ್ನಾಕ್ರಮಿಸಿ, ಆಳುತ್ತಿದ್ದ ಷಹಜಿಯನ್ನು ಓಡಿಸುವ ಪ್ರಯತ್ನಮಾಡಿದರು. ಷಹಜಿಯು ಬಿಜಾಪುರದ ಸುಲ್ತಾನನ ಬೆಂಬಲ ಪಡೆದಿದ್ದುದರಿಂದ, ಸುಲಭವಾಗಿ ಜಗ್ಗುವಂತಿರಲಿಲ್ಲ. ಈ ಷಹಜಿಗೂ ಕೆಂಪೇಗೌಡನ ಕಡೆಯವರಿಗೂ ಆರುಸಾರಿ ಯುದ್ಧವಾಯಿತು. ಈ ಯುದ್ಧಗಳಲ್ಲಿ. ಜಯವು ಕೆಂಪೇಗೌಡನಿಗಾದರೂ, ಷಹಜಿಯು ಬೆಂಗಳೂರನ್ನು ಬಿಟ್ಟು ತೊಲಗಲಿಲ್ಲ.

ಕಡೆಗೆ ಏಳನೆಯ ಸಾರಿ ನಡೆದ ಯುದ್ಧದಲ್ಲಿ ಇಮ್ಮಡಿ ಕೆಂಪೇಗೌಡನ ಸೈನಿಕರು. ಷಹಜಿಯ ಮರಾಟಾ ಸೈನ್ಯವನ್ನೂ, ಸುಲ್ತಾನನ ದಂಡನ್ನೂ

ಹಾರು ಹೊಡೆದು ಅವರ ಸಕಲಸಂಪತ್ತಿಯನ್ನೂ ದೋಚಿಕೊಂಡು, ಷಹಜಿಯನ್ನೂ, ಅವನ ಕಡೆಯವರನ್ನೂ, ಬಿಜಾಪುರದ ಕಡೆಗೆ ಓಡಿಸಿಬಿಟ್ಟರು. ಈ ಘಟನೆಯ ತೇದಿಯು ಗೊತ್ತಾಗದಿದ್ದರೂ ಇದು ಸರಿಸುಮಾರು ಕ್ರಿ. ಶ. ೧೬೫೩-೫೪ ರಲ್ಲಾಯಿತೆಂದು ತಿಳಿದುಕೊಳ್ಳಬಹುದಾಗಿದೆ- ಈ ಷಹಜಿಯನ್ನು ಯುದ್ಧದಲ್ಲಿ ಸೋಲಿಸಿ ಓಡಿಸಿದ ಕಥೆಯನ್ನು "ಏಕಾಂಬರಶಾಸ್ತ್ರಿ"ಯು, ತನ್ನ "**ವೀರಭದ್ರವಿಜಯ**"ದಲ್ಲಿ ಅತ್ಯಂತ ಸುಂದರವಾಗಿ ವರ್ಣಿಸಿರುತ್ತಾನೆ—

೧೦) ರಣದೂಲ್ಲಾಖಾನನನ್ನು ಹಿಮ್ಮೆಟ್ಟಿಸಿದ ಮೈಸೂರು ಕಂಠೀರವ ನರಸರಾಜನು (ಕ್ರಿ. ಶ. ೧೬೩೮- ೫೯) ಕೆಂಪೇಗೌಡನ ರಾಜ್ಯವನ್ನು ಆಕ್ರಮಿಸ ತೊಡಗಿದನು. ಇವನು ಬೆಂಗಳೂರು ಜಿಲ್ಲೆ ಚನ್ನಪಟ್ಟಣದವರೆಗೂ ಮುಂದು ವರೆದು ಶಕ ೧೫೭೯ (ಕ್ರಿ. ಶ. ೧೬೫೭) ವರ್ಷ, ಮಳೂರು ಅಪ್ರಮೇಯ ದೇವರಿಗೆ ಕೆಲ ದಾನಮಾಡಿದನೆಂದು "ವಿಭೂತಿಗೆರೆ-ಬ್ಯಾಲಕುಳಿ" ಶಾಸನವು ಹೇಳುವುದು.

ಚನ್ನಪಟ್ಣ ನಂ. ೨೩

ಈ ಸುಮಾರಿಗೆ ಪ್ರಬುದ್ಧನಾಗಿದ್ದ, ಮುಮ್ಮಡಿ ಕೆಂಪೇಗೌಡನು ಕಂಠೀರವ ನರಸರಾಜನನ್ನು ಯುದ್ಧದಲ್ಲಿ ಸೋಲಿಸಿ ಮೈಸೂರಿನ ಕಡೆಗೆ ಓಡಿಸಿ ಬಿಟ್ಟನೆಂದು ವೀರಭದ್ರವಿಜಯದಲ್ಲಿ ಹೆಗ್ಗಳಿಕೆಯಿಂದ ವರ್ಣಿಸಿದೆ. ಇದು ಐತಿಹಾಸಿಕ ಸತ್ಯವೂ ಆಗಿದೆ. ಈ ಕಂಠೀರವ ನರಸರಾಜನೊಡನಾದ ಯುದ್ಧ ವಿಜಯವು ಕ್ರಿ. ಶ. ೧೬೫೮ರ ಸುಮಾರಿನಲ್ಲಾಯಿತೆಂದು ತಿಳಿದುಕೊಳ್ಳ ಬಹುದು."

೧೧) ಇಮ್ಮಡಿ ಕೆಂಪೇಗೌಡನ ಎರಡನೆಯ ಹೆಂಡತಿಯಾದ "**ಲಿಂಗಮ್ಮಾಜಿ**"ಯ ಒಬ್ಬನೇ ಮಗನಾದ "**ಇಮ್ಮಡಿ ಹಿರಿಯ ಕೆಂಪಗೌಡ**"ನು ಬಹುಭಾಷಾ ಪಂಡಿತನಾಗಿದ್ದುದಲ್ಲದೇ, ಹಲವು ಭಾಷೆಗಳಲ್ಲಿ ಕವಿಯೂ ಆಗಿದ್ದನೆಂದೂ ಆಶುಕವಿಯಾಗಿದ್ದನೆಂದೂ ಈತನನ್ನು "ವೀರಭದ್ರ ವಿಜಯ" ದಲ್ಲಿ ಹೀಗೆ ಕೊಂಡಾಡಿದೆ—

ನಾನಾಭಾಷಾ ವಿಶೇಷ ಗ್ರಥಿತ ಮೃದುತರೋದಾರ ಚಿತ್ರಾಶುಧಾರಾ।
ಧಾರಾಳ ಪ್ರೌಢಿಮಾಢೌಕಿತ ನವಕವಿತಾಗುಂಭ ಪುಂಭಾವ ವಾಣೀ ॥

ಆಸೀದಾಸೇತು ಸೀತಾಚಲ ಮಹಿತಗುಣೋ ವೈಭವಾಖಂಡಲಾಭೋ।
ಲಾಭೋವಾಂಛಾ ಫಲಾನಾಮಿವ ಭುವಿ ಸುಧಿಯಾ
ವಿಮ್ಮಡೀಹಿರ್ಯ ಕೆಂಪಃ ॥ ೨೦ ॥

ರಮ್ಯಾನ್ವಯಂ ಮಧುರ ವೃತ್ತಿ ಮುದಾರ ರೀತಿಂ।
ಸಾಲಂಕೃತಿಂ ಸುಗುಣಮರ್ಥ ಗಭೀರ ಮಾಢ್ಯಂ॥
ಕಾವ್ಯಂ ಕವೇರಿವ ಗಿರಾ ಕಥಯಂತಿ ನಿತ್ಯಂ।
ಶ್ರೀಹಿರ್ಯ "ಕೆಂಪ ನೃಪತಿಂ" ಸರಸಾಃ ಕವೀಂದ್ರಾಃ ॥ ೨೨ ॥
ವೀರಭದ್ರವಿಜಯ ಉಲ್ಲಾಸ **೪.**

ಈತನು ನಾನಾ ಭಾಷೆಗಳಲ್ಲಿ ಕವಿತ್ವಮಾಡಿ ಬರೆದಿಟ್ಟಿದ್ದ ಗ್ರಂಥ ಸಮುದಾಯವು ದೊರೆತಿರುವುದಿಲ್ಲ. ಆದರೆ ಮದರಾಸು. ಪ್ರಾಚ್ಯಗ್ರಂಥಾಗಾರದಲ್ಲಿರುವ ಒಂದು ತೆಲುಗುಭಾಷೆಯ "**ಗಂಗಾ, ಗೌರೀ ವಿಲಾಸಮು**" ಎಂಬ ಗ್ರಂಥವು ದೊರೆತಿದೆ. ಇದನ್ನು ಮಾನ್ಯ **ಚಾರ್ಲ್ಸಸಾಹೇಬರವರು** ಪ್ರತಿಲಿಪಿಮಾಡಿಸಿ. ಪ್ರಾಚ್ಯ ಲಿಖಿತ ಭಂಡಾರ ಸೂಚಿ, ಸಂಪುಟ ೮, **ಪುಟ** ೨೦೯೨–೯೮ ರಲ್ಲಿ ಸಂಗ್ರಹಿಸಿರುತ್ತಾರೆ, ಇದು ಕ್ರಿ. ಶ. ೧೮೬೪ ರಲ್ಲಿ **ಪ್ರತಿ** ಮಾಡಿದ್ದು. ಈ ಹಿರಿಯ ಕೆಂಪರಾಯನು ತನ್ನ ಗ್ರಂಥದ ಮೊದಲಿನಲ್ಲಿ, ತನ್ನ ಕುಲಸ್ವಾಮಿಯಾದ ಸೋಮೇಶ್ವರನನ್ನು—

[ವೃತ್ತ] ॥ ಶ್ರೀ ಗೌರೀಪತಿ ಚಂದ್ರಶೇಖರ ಸತೀ ಚಿತ್ತಾಬ್ಜರೋಲಂಬ ಸ।
ನ್ನಾಗಾಧೀಶ್ವರ ಹಾರ ಮಾರ ಮಥನಾ ನಾಕೇಶ ಸಂಸೇವಿತಾ ॥
ಯೋಗೀಂದ್ರಾರ್ಚಿತ ಪಾದ ಪದ್ಮ........ಯೋಹಾಮ ಯಥಾರ್ಗಂಗ।
........ಹಿರಿಯ ಕೆಂಪ ನೃಪರ್ತಿ ರಕ್ಷಿಂಚು ಸೋಮೇಶ್ವರಾ ॥

[ಕಂದ] ॥ ಸುಕವುಲಕು ಸಾರಮ್ಯೆ ಬಹು।
ಸು (ಕು) ಕವುಲ ಕೆದ ಶೂಲಮ್ಯೆ ಯಕುಂಠಿತ ಧಾರೈ ॥
ಚಕಿತ ಚಕಿತ ವಾದ್ಯಮುಲ್ಯೆ।
ವಿಕಸಿಂ ಚುನು "ಪೆದ್ದ ಕೆಂಪವಿಭು" ಸತ್ಕವಿತುಲ್ ॥

[ಕಂದ] ॥ ಗಂಗಾ ಗೌರಿ ವಿಲಾಸಮು।
ಸಂಗತಿ ಪದ ಪದ್ಯಮುಲಕು ಸರಸತ ವಿವರ್ರ ॥

ರಂಗದ್ಭಾಷಣ ಮುಲು ಚೆಲ।
ಗಂಗಾ "ಪೆದ್ದ (ದ) ಕೆಂಪರಾಯ" [ವಿಭು] ಜೊನರಿಂಚರ್ಚು ॥ *

ಈ ತೆಲುಗು ಕಾವ್ಯವನ್ನು ನೋಡಿ **ಶ್ರೀ ಸುಬ್ಬರಾಮಪ್ಪ**ನವರು, ಮಾಗಡಿ ಕೆಂಪೇಗೌಡನೂ, ಇವರ ವಂಶದವರೂ "ತೆಲುಗ"ರೆಂದು ನಿರ್ಣಯಿಸಿ ಬಿಟ್ಟರು. ಇವರಿಗಿನ್ನೇನು ಗೊತ್ತಿರದಿದ್ದರಿರಲಿ ಇವರೇ ಉದಹರಿಸಿರುವ ಮಂಗಳಾಚರಣೆಯಾದ ವೃತ್ತದಲ್ಲಿರುವ "ಹಿರಿಯ ಕೆಂಪ ನೃಪತಿ"ಯೆಂಬು ದನ್ನಾದರೂ ನೋಡಲಿಲ್ಲ. ಇವರ ಬರೆಹಕ್ಕೆ **ಶ್ರೀ ಕೆ. ನಾಗರಾಜರು** ಇದೇ "ಪ್ರಜಾವಾಣಿ" ಪತ್ರಿಕೆಯ. ತಾ॥ ೧೯, ೨೦, ೨೧ ೨೨, ೨೫-೫-೧೯೫೭ ರಲ್ಲೂ ಮತ್ತು ೧೨-೬-೫೭ರಲ್ಲಿ ವಿಸ್ತಾರವಾಗಿ ಉತ್ತರವನ್ನು ಬರೆದು ಶ್ರೀ ಸುಬ್ಬರಾಮಪ್ಪನವರ ವಾದಸರಣಿಯ ನಿಸ್ಸಾರತೆಯನ್ನು ತೋರಿಸಿರುತ್ತಾರೆ—

ಇಮ್ಮಡಿ ಕೆಂಪೇಗೌಡನ ಮಗನಾದ ಈ "ಹಿರಿಯ ಕೆಂಪನೃಪತಿ"ಯು ನಾನಾ ಭಾಷೆಗಳಲ್ಲಿ ಗ್ರಂಥವನ್ನು ರಚಿಸಿದ್ದನೆಂದು ಇದರಿಂದ ಗೊತ್ತಾಗುವುದು. ಈ ಹಿರಿಯ ಕೆಂಪನೃಪತಿಯ ಹೆಂಡತಿಯಾದ, "**ವೆಂಕಟಕೃಷ್ಣಾಜಮ್ಮ**"ನು ತುಮಕೂರು ಜಿಲ್ಲೆ, ಕುಣಿಗಿಲು ತಾಲ್ಲೂಕಿನಲ್ಲಿ "**ಕೃಷ್ಣಸಾಗರ**"ವೆಂಬ ಕೆರೆಯನ್ನು ಕಟ್ಟಿಸಿ, ತನ್ನ ಮಾವನಾದ ಇಮ್ಮಡಿ ಕೆಂಪೇಗೌಡನಿಗೂ, ತನ್ನ ಅತ್ತೆಯಾದ ಲಿಂಗಾಜಮ್ಮನಿಗೂ ಪುಣ್ಯವಾಗಲೆಂದು ಅಗ್ರಹಾರ ಮಾಡಿಸಿ ದಾನ ಮಾಡಿರುತ್ತಾಳೆ. ತನ್ನ ಮತ್ತು ತನ್ನ ಗಂಡನ ವಿಷಯವನ್ನು ಬಿಟ್ಟು ಅತ್ತೆ-ಮಾವಂದಿರುಗಳ ಶ್ರೇಯಸ್ಸನ್ನು ಕೋರುವ ಸೊಸೆಯರು ಲೋಕದಲ್ಲಿ ಅತ್ಯಂತ ವಿರಳವಾಗಿರುವರು.

೧೨) ಗೋವಿಂದ ವೈದ್ಯನು ರಣದುಲ್ಲಾಖಾನನು ಶ್ರೀರಂಗಪಟ್ಟಣದ ಮುತ್ತಿಗೆಯಲ್ಲಿ ಹಿಮ್ಮೆಟ್ಟಿದ ಸಂಗತಿಯನ್ನೂ ಆಗ ರಾಜ್ಯ ಕಳೆದುಕೊಂಡು ಇಮ್ಮಡಿ ಕೆಂಪೇಗೌಡನು (ಬೆಳವಂಗಲದ ನಾರಣಪ್ಪನ ಮನೆಯಲ್ಲಿ ಆಳಾಗಿದ್ದಾಗ) ಪರದೇಶಿಯಾಗಿದ್ದುದನ್ನೂ ತಿಳಿದಿದ್ದರೂ, ಶ್ರೀರಂಗಪಟ್ಟಣದ

* ಈ ಪದ್ಯಗಳು ಶ್ರೀ ವಿದ್ವಾನ್ ಸುಬ್ಬರಾಮಪ್ಪ ಅವರು ಬೆಂಗಳೂರು ಪ್ರಜಾವಾಣಿ ದಿನಪತ್ರಿಕೆಯ ತಾ॥ ೧-೬-೧೯೫೭ ರಲ್ಲಿ ಪ್ರಕಟಿಸಿದ್ದುದನ್ನು ಎತ್ತಿ ಬರೆದಿದೆ. ಮೊದಲನೆಯ ವೃತ್ತದ ೩-೪ನೆಯ ಚರಣಗಳು ತುಂಬಾ ಅಶುದ್ಧವಾಗಿವೆ. ಉಳಿದವುಗಳನ್ನು ಆದಷ್ಟು ಸರಿಪಡಿಸಿ ತೋರಿಸಿದೆ. —**ಸಂಪಾದಕ.**

ಮುತ್ತಿಗೆಯಲ್ಲಿ "ಮಾಗಡಿ ರಾಜ"ನೂ ಪಾತ್ರವಹಿಸಿದ್ದನೆಂದು ಹೇಳಿದ್ದಾನೆ. ಇಲ್ಲಿವನು–

ಹೊಳವನಹಳ್ಳಿ ಬಿಜ್ಜಾವರ ಕೋಳಾಲ। ಬಳಲಾಪುರ "ಮಾಗಡಿಯ" ॥
ಇಳೆಯಾಣ್ಮರು ಬಹುಬಲ ಸಹ ಲಗ್ಗೆಯ। ತಳುವದೇರಿದ ರುಬ್ಬಿನಲಿ
ಬಡಗದೆಶೆಯ ಬೀಡಿಳಿದಿರ್ದ "ಮೊರಸರ"। ಪಡೆ ಹನುಮನ ನೇಮದಲಿ॥
ತುಡುಗಿ ಸಾಸಿರ ಸಂಖೆಯೇಣಿಗಳನು ಬಾಚಿ। ಯೊಡನೆ ಬೊಬ್ಬಿರಿದೇರಿದರು॥
ಕಂಠೀರವ ನರಸರಾಜವಿಜಯ ಸಂಧಿ ೧೪.

ಈ ಸಂಗತಿಗಳು ಎರಡು ಬೇರೆ ಬೇರೆ ಕಾಳಗಗಳಲ್ಲಿ ಕಂಠೀರವ ನರಸರಾಜನು ಹೋರಾಡಿದ ಸಂಗತಿಯನ್ನು ಒಂದಾಗಿ ಕೂಡಿಸಿ ಹೇಳುವಾಗ ಗೋವಿಂದ ವೈದ್ಯನು ಈ ಅಸಂಗತಗಳನ್ನು ಸೇರಿಸ ಬೇಕಾಯಿತು. ಈ "**ಮಾಗಡಿಯಧಿಪತಿ**" ಯೆಂದು ಇಲ್ಲಿ ಹೇಳಿರುವ ರಾಜನು ಇಮ್ಮಡಿ ಕೆಂಪೇಗೌಡನ ಮಗನಾದ ಮುಮ್ಮಡಿ ಕೆಂಪೇಗೌಡನೇ ಆಗಿರಬೇಕೆಂಬುದು ಈ ಹಿಂದೆ ಬರೆದ ವಿವರಣೆಯಿಂದ ಗೊತ್ತಾಗುವುದು. ಈ ಮಾಗಡಿಯಧಿಪತಿಯೂ ಕಂಠೀರವನರಸ ರಾಜನನ್ನು ಸೋಲಿಸಿ ಓಡಿಸಿಕೊಂಡು ಹೋಗಿ ಒಂದು ವೇಳೆ ತನ್ನ ಸಹಾಯಕರೊಡನೆ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದ್ದರೂ ಇದ್ದಿರಬಹುದು –

ಗೋವಿಂದ ವೈದ್ಯನು ತನ್ನ ಪೋಷಕನಾದ "ಕಂಠೀರವ ನರಸರಾಜ" ನನ್ನು ಅತಿಶಯವಾಗಿ ಹೊಗಳಿ ಮೆಚ್ಚಿಸುವ ಭರದಲ್ಲಿ ಬರೆಯುತ್ತಾ ಸಂಧಿ ೨೦ ರಲ್ಲಿ ಕಂಠೀರವ ನರಸರಾಜನ "ಮಹಾನವಮಿ" ಉತ್ಸವಕ್ಕೆಂದು ಬಂದಿದ್ದವರನ್ನು ಹೇಳುತ್ತಾ – ನಂಜರಾಯಪ್ಪಣ (ಪ ೬೨) ಬೇಡಮನ್ನೆಯ (೬೪) ಮಲೆಯಾಳದವನೀಶ (೬೫) ತಂಜಾವೂರು ಮಂತ್ರಿ (೬೭) ಮಧುರೆ ತಿರುಮಲೇಂದ್ರನ ಮಂತ್ರಿ (೬೮) ತೆಂಜೆ ಇಕ್ಕೇರಿ (೬೯) ಹೀಗೆ ಹಲವು ರಾಜರು ಬಂದಿದ್ದರೆಂದು ವರ್ಣಿಸುತ್ತಾನೆ – ಇಲ್ಲಿಯೇ ಕುಣಿಗಿಲು – ಮಾಗಡಿಯಧಿಪತಿಗಳೂ ಬಂದಿದ್ದರೆಂದು ವರ್ಣಿಸುತ್ತಾನೆ. ತನಗೆ ಬೇಡವಾದವರಾದರೂ. ಈ ಮಾಗಡಿಯಧಿಪತಿಗಳನ್ನು ಅತ್ಯಂತ ಸುಂದರ ರೀತಿಯಲ್ಲಿ ಹೀಗೆ ವರ್ಣಿಸುತ್ತಾನೆ —

ಕಿವಿಯೊಳೊಪ್ಪುವ ಕಾಮಾಕ್ಷಿ ಕಡಕು ಗಂಟೆ। ತವೆ ಚಿನ್ನಸರ ಪೈರಣೆಯ॥
ಚವಿಯಿಂದ ತನ್ನಯ ಬಲಸಹ "ಕುಣಿಗಲ್ಪು।ರವ ನಾಳ್ವ" ನೃಪನೈ ತಂದ॥
ನಾಗರ ಫಣಿ ಪಟ್ಟಿಯ ಪಟ್ಟಿ ಕೊರಳೊಳು। ರಾಗದೆ ಮೆರೆವ ಉಳಿಗಳ॥
ತೂಗುವಾಯುಧಗಳ ಭಟರ ಸಂಮೇಳದೆ। "ಮಾಗಡಿಯಧಿಪತಿ" ಬಂದ॥

ಕಂಠೀರವ ನರಸರಾಜ ವಿಜಯ ಸಂಧಿ ೨೦, ೬೦–೬೧

ಮತ್ತೂ ಗೋವಿಂದ ವೈದ್ಯನು ನಿಜವಾಗಿರಲಿ; ಸುಳ್ಳಾಗಿರಲಿ; ಅನೇಕ ರಾಜರು ಕಂಠೀರವ ನರಸರಾಜನ ಅಂಕಿತದಲ್ಲಿದ್ದರೆಂದು ಜನ ತಿಳಿಯಲೆಂದು ಶ್ರೀರಂಗಪಟ್ಟಣದ ರಂಗನಾಥೋತ್ಸವಕ್ಕೆಂದು ಬಂದಿದ್ದರೆಂದು ಹಲವು ರಾಜರನ್ನು ಹೆಸರೆತ್ತಿ ಹೇಳುವಾಗ ಕುಣಿಗಿಲು–ಮಾಗಡಿಯಧಿಪತಿಗಳನ್ನು ಸೊಗಸಾದ ಪದ್ಯಗಳಲ್ಲಿ ಹೀಗೆ ವರ್ಣಿಸಿರುತ್ತಾನೆ –

ಬೆಡಗಿನ ತೇಜಿಯನೇರಿ ಚಾಮರಗಳ। ಬಿಡದೆ ಢಾಳಿಸಿಕೊಳ್ಳನಾರೆ॥
ಮಡದಿರನ್ನಳೆ ಕೇಳು "ಕುಣಿಗಿಲ ನಾಳುವ। ದೊಡ ಕೆಂಪಗೌಡ"ನೆ ಕೇಳು
ಮುತ್ತಿನ ಕುಚ್ಚಿನಂದಣವೇರಿ ಸುಭಟರ। ಮೊತ್ತದೆ ಬಹ ದೊರೆಯಾರೆ॥
ಉತ್ತಮ "ಮಾಗಡಿಯಧಿ ಪತಿ ಚಿಕಗೌಡ" ಚಿತ್ತಜರೂಪ ನಬ್ಜಾಕ್ಷಿ॥

ಕಂಠೀರವ ನರಸರಾಜವಿಜಯ ಸಂಧಿ॥ ೨೫॥ ೯೫–೯೬.

ಈ ಪದ್ಯಗಳಲ್ಲಿ ಗೋವಿಂದ ವೈದ್ಯನು ಬಣ್ಣಿಸಿರುವ ಸೊಗಸನ್ನು ನೋಡಿದರೆ ಅವನಿಗೆ ಮಾಗಡಿ ದೊರೆಗಳ ವೈಭವದ ವಿಷಯದಲ್ಲಿ ಇದ್ದ ಆದರವನ್ನು ತೋರಿಸುವುದು.

೧೩) ಇಮ್ಮಡಿ ಕೆಂಪೇಗೌಡನನ್ನು ಏಕಾಂಬರ ಶಾಸ್ತ್ರಿಯು ತನ್ನ "ವೀರಭದ್ರವಿಜಯ" ದಲ್ಲಿ ಒಂದು ಸಂಸ್ಕೃತ ಗದ್ಯದಲ್ಲಿ ಹೀಗೆ ವರ್ಣಿಸುತ್ತಾನೆ –

ಯಶ್ಚ ಪುಂಡರೀಕಾಕ್ಷೋಽಪಿ ನ ಜನಾರ್ಧನಃ ಚತುರಾನನೋಽಪಿ ನ ಪಂಕಜಾತ ಪ್ರಭವಃ ಸ್ನಿಗ್ಧತೇಜೋಽಪಿ ನ ಕುವಲಯಾಹಿತಃ ಕಲಾನಿಧಿರಪಿ ನ ದೋಷಾಕರಃ ವಿಷಮಾಯುಧೋಽಪಿ ನ ಸುಮನಃ ಪ್ರಹರಣಃ ಜಿಷ್ಣುರಪಿ ನ ಗೋತ್ರಭೇದೀ ಶುಚಿರಪಿ ನ ದೇವಸ್ವಹರ್ತಾ ಧರ್ಮರಾಜೋಽಪಿ ನ ಕಾಲಸಮಾಖ್ಯಃ ಕರ್ಬುರಾಭಿಖ್ಯೋಽಪಿ ನ ಸನ್ನಿಕಷೋದಯಃ ಪ್ರಚೇತಾ ಅಪಿ ನ ಜಲಾಧಿಪಃ ಸದಾಗತಿರಪಿ ನ ಅನಿಲಃ ಧನದೋಽಪಿ ನ ಕುಬೇರಃ ರಾಜಶೇಖರೋಽಪಿ ನ ಕ್ರತುಧ್ವಂಸೀ ವಿಚಿತ್ರ ಚಾರಿತ್ರಃ॥

ಇಮ್ಮಡಿ ಕೆಂಪೇಗೌಡನ ವಿಷಯುವನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಿದೆ. ಈ ಕಂಠೀರವ ನರಸರಾಜನೊಡನಾದ ಕಾಳಗವಾದ ಮೇಲೆ ಇಮ್ಮಡಿ ಕೆಂಪೇ ಗೌಡನು ಈ ಯುುದ್ಧದ ಕಾಲವಾದ ಸು॥ ಕ್ರಿ. ಶ. ೧೬೪೮ ರಿಂದ ಈಚೆಗೆ ಕ್ರಿ. ಶ. ೧೬೫೬ರ ವರೆಗೂ ತನ್ನ ನಾಡು ಬೀಡುಗಳನ್ನು ಸುಖವಾಗಿ ಆಳಿ ಕೊಂಡಿದ್ದನೆಂದು ಊಹಿಸಬಹುದಾಗಿದೆ.

ಇಮ್ಮಡಿ ಕೆಂಪೇಗೌಡನು ನಾನಾಬಗೆಯ ಕೆರೆ ಕುಂಟೆ ದೇವಾಲಯು ಗಳನ್ನು ಕಟ್ಟಿಸಿದ್ದಲ್ಲದೆ ಹಲವು ಬಗೆಯ ದಾನ-ಧರ್ಮಗಳನ್ನು ಮಾಡಿ ಕೀರ್ತಿಕಾಯುನಾದನು. ಇಲ್ಲಿವನ ಜೀವನ ವೃತ್ತಾಂತದ ಎಲ್ಲ ವಿಷಯು ಗಳನ್ನೂ ಕುರಿತು ಚರ್ಚಿಸಿ ಬರೆಯುುವುದಕ್ಕೆ ಸ್ಥಳಾವಕಾಶವಿಲ್ಲವಾದುದರಿಂದ ವಿಸ್ತರಿಸಿ ಬರೆದಿರುವುದಿಲ್ಲ - ಜನಕ್ಕೆ ಬೇಕೆನಿಸಿದರೆ ಈ ವಿಷಯುವನ್ನೇ ಬೇರೊಂದು ಗ್ರಂಥವಾಗಿ ಬರೆದು ಪ್ರಕಟಿಸಬೇಕೆಂದು ಯೋಚಿಸಿದ್ದೇನೆ.

## ಇಮ್ಮಡಿ ಕೆಂಪೇಗೌಡನ ರಾಜ್ಯವಿಸ್ತಾರ

ಇಮ್ಮಡಿ ಕೆಂಪೇಗೌಡನ ರಾಜ್ಯವಿಸ್ತಾರವೆಷ್ಟಿತ್ತೆಂದು ಸರಿಸರಿಯಾಗಿ ಹೇಳುವುದಕ್ಕೆ ನೇರವಾದ ಸಾಧನವಿಲ್ಲವಾಗಿದೆ. ಆದರೂ ಏಕಾಂಬರಶಾಸ್ತ್ರಿಯುು ತನ್ನ "ವೀರಭದ್ರ ವಿಜಯು"ದಲ್ಲಿ ಈ ವಂಶದವರನ್ನು ಕುರಿತು ಹೇಳುತ್ತಾ- "ಕರ್ಣಾಟ ರಾಜ್ಯಲಕ್ಷ್ಮೀ ಕೋಟೀರ ನಿಬದ್ಧ ಮೌಕ್ತಿಕ ಪ್ರಖ್ಯಾಃ" ಎಂದೂ ಮತ್ತು ಮುಂದೆ "ಕರ್ಣಾಟಾಂಧ್ರ ದ್ರವಿಡವನಿತಾ ಕರ್ಣಪೂರಾನ್ ವ್ಯತನ್ವನ್" ಎಂದೂ ಹೇಳಿರುವುದನ್ನು ಈ ಹಿಂದೆಯೇ ಉದಹರಿಸಿದೆ. ಇದರಂತೆ ಇವನ ರಾಜ್ಯವು "ಕನ್ನಡ-ತೆಲುಗು-ತಮಿಳು" ಭಾಷಾಭೂಮಿ ಯಲ್ಲೆಲ್ಲಾ ವ್ಯಾಪಿಸಿತ್ತೆಂದು ಊಹಿಸಬಹುದಾಗಿದೆ.

ಈ ಜಯುಪ್ರಶಸ್ತಿಯ ಎರಡನೆಯ ಭಾಗದ ಹಾಡು ೩ರಲ್ಲಿ ೩೦೦ ಮದ್ದಾನೆಗಳೂ ೯ ಸಾವಿರ ಕುದುರೆ ಒಂಟೆಗಳ ಸವಾರರ ಸೈನ್ಯವೂ ಬಹಳ ಕಾಲ್ಬಲವೂ ಇವನಲ್ಲಿ ಇದ್ದಿತೆಂದು ಗೊತ್ತಾಗುವುದು. ಇದೇನೂ ಅತಿ ಶಯೋಕ್ತಿಯು ಮಾತಾಗಿರಲಾರದು -

ವೆಂಕಟಪತಿ ರಾಜನನ್ನು ರಕ್ಷಿಸುವ ಕಾರ್ಯದಲ್ಲಿ ಇವನ ಮಾತು ಕೇಳಿ ಸೈನ್ಯದೊಡನೆ ಇವನೊಡನೆ ಬಂದ ರಾಜರನ್ನು ಎರಡನೆಯ ಭಾಗದ ಹಾಡು

ಗಳು ೪-೫-೬ರಲ್ಲಿ "ತಿಮ್ಮರಾಜ ರಂಗಪತಿರಾಜ ಮಾಕರಾಜ ನಂದ್ಯಾಲ ವೆಂಕಪರಾಜ ಅಳಿಯೊಬ್ಬರಾಜ (?) ಶ್ರೀರಂಗಪತಿರಾಜ ಮೂರ್ತಿರಾಜ" ಮೊದಲಾದವರೂ ಮತ್ತು-"ನೆಲಿಗೋಟೆ ತಿಮ್ಮನಾಯಕ ದಾಮೆರ್ಲಿ ವೆಂಕಟಪ್ಪನಾಯಕ, ದಾವೆ(ಪಿ ?)ಳ, ವೆಂಕಟನಾಯಕ, ರಾಮಭದ್ರನೃಪ, ದಳವಾಯಿ ಪಾಪಯ್ಯ, ಪವಡದ (ಪಾವುಗಡ ?) ಕೃಷ್ಣಪ್ಪ, ಚವರದ ನಾರಣೇಂದ್ರ" ಇವರುಗಳೂ, ಮತ್ತು-"ಜಗದೇವರಾಯ, ಚಿಕ್ಕರಾಯ, ತಮ್ಮಯ್ಯಗೌಡ" ಮೊದಲಾದವರೂ ಇವನು ಹೇಳಿದಂತೆ ಕೇಳುತ್ತಿದ್ದರೆಂದು ಗೊತ್ತಾಗುವುದು. ಒಂದು ರೀತಿಯಿಂದ ಇವರುಗಳೆಲ್ಲರ ಮೇಲೆಯೂ ಇವನ ಉನ್ನತ ಅಧಿಕಾರವಿದ್ದಿತೆಂದು ಗೊತ್ತಾಗುವುದು.

ಮತ್ತು ಇದೇ ಎರಡನೆಯ ಭಾಗದ ಹಾಡು ೧೩ ರಲ್ಲಿ ಇಮ್ಮಡಿ ಕೆಂಪೇಗೌಡನು ವೆಂಕಟಪತಿ ರಾಜನನ್ನು ಎದಿರುಗೊಂಡಾಗ ಇವನ ಪರಿವಾರದಲ್ಲಿದ್ದವರನ್ನು ಹೆಸರಿಸುತ್ತಾ-"ಕೆರೆಯೂರ ತಿಮ್ಮನಾಯಕ, ಹೊಸಕೋಟೆ ತಮ್ಮಧೀರ, ದೇವಂಡಹಳ್ಳಿಯ, ಜೇನಭೈರ, ಚಿಕ್ಕಬಲ್ಲಾಳಪುರದ, ಬೈರೇಂದ್ರ, "ಮೈಸೂರವರು" ಮಾಸ್ತಿ ಕರಿಯೇಂದ್ರ, ಜವ್ವಾದಿಯ ನರವೀರನೃಪ, ಹೊಸವೂರ. ಚಂದ್ರಶೇಖರ, ಬಾಗಲೂರ ಯರ್ರೇಂದ್ರ" ಇವರೆಲ್ಲಾ ಇವನೊಡನೆ ಬಂದಿದ್ದರೆಂದು ಹೇಳಿದೆ. ಇವರನ್ನೆಲ್ಲಾ ಕೂಡಿಸಿ ತಂದವನು ಇಮ್ಮಡಿ ಕೆಂಪೇಗೌಡನೇ ಆಗಿದ್ದುದರಿಂದ. ಇವರೆಲ್ಲರೂ ಇಮ್ಮಡಿ ಕೆಂಪೇಗೌಡನ ಉನ್ನತಾಧಿಕಾರವನ್ನು ಮಾನ್ಯಮಾಡಿದ್ದವರೆಂದು ನೇರವಾಗಿ ಗೊತ್ತಾಗುವುದು. ಇದರಲ್ಲಿರುವ ಐತಿಹಾಸಿಕ ಸತ್ಯವನ್ನು ಸಾಕ್ಷ್ಯಗಳೊಡನೆ ವಿವರಿಸುವುದಕ್ಕೆ ಇಲ್ಲಿ ಅವಕಾಶವಿಲ್ಲವಾಗಿದೆ. ಈ ಮುನ್ನುಡಿಯೇ ಬೆಳೆದು ಹೋಗುತ್ತಿರುವುದರಿಂದ ಈ ವಿಷಯವನ್ನು ಇಲ್ಲಿ ವಿಸ್ತಾರವಾಗಿ ಚರ್ಚಿಸಿರುವುದಿಲ್ಲ.

ಇದನ್ನೆಲ್ಲಾ ನೋಡಿದರೆ ಇಮ್ಮಡಿ ಕೆಂಪೇಗೌಡನ ಅಧಿಕಾರವನ್ನು ಮಾನ್ಯಮಾಡಿದ್ದ ರಾಜ್ಯ ವಿಸ್ತಾರವು. ಈಗಿನ ಬೆಂಗಳೂರು, ತುಮಕೂರು, ಮೈಸೂರು, ಕೋಲಾರ, ಅನಂತಪುರ, ಕಡಪ, ಚಿತ್ತೂರು, ಜಿಲ್ಲೆಗಳನ್ನೂ, ಸೇಲಂ ಜಿಲ್ಲೆಯ ಬಹುಭಾಗ, ಕೊಯಮತ್ತೂರು ಜಿಲ್ಲೆಯ ಸ್ವಲ್ಪಭಾಗ,

ಹಾಸನ ಜಿಲ್ಲೆಯ ಸ್ವಲ್ಪ ಭಾಗಗಳಲ್ಲೆಲ್ಲಾ ಹರಡಿತ್ತೆಂದು ಊಹಿಸಬಹುದಾಗಿದೆ– ಮಲೆನಾಡಿನ "ಹಂಪ"ನೂ ಇವನನ್ನು ಉನ್ನತಾಧಿಕಾರಿಯೆಂದೊಪ್ಪಿದ್ದನು.

## ರಾಜಧಾನಿ

ಕೆಂಪೇಗೌಡನು "**ಯಲಹಂಕ**" ನಾಡೆಂಬ ರಾಜ್ಯದ ಪರಂಪರಾಗತ ವಾದ ರಾಜಕುಲದವನು. ಈಗ ಬೆಂಗಳೂರಿಗೆ ಉತ್ತರದಲ್ಲಿ ಸುಮಾರು ಹತ್ತು ಮೈಲಿಯಲ್ಲಿರುವ "ಯಲಹಂಕ"ವು ಇವನ ಹಿರಿಯರ ಕಾಲದ ರಾಜಧಾನಿ ಯಾಗಿದ್ದಿತು. ಹಿರಿಯ ಕೆಂಪೇಗೌಡ–ಇಮ್ಮಡಿ ಕೆಂಪೇಗೌಡರುಗಳು ಈ "ಯಲಹಂಕ ರಾಜಧಾನಿ"ಯಲ್ಲಿ ನೆಲೆಯಾಗಿ ವಾಸಮಾಡುತ್ತಿದ್ದರೆಂದು ಈ ವಂಶದವರ ಒಂದು ಶಾಸನದಲ್ಲಿಯೂ ಹೇಳಿದ್ದನ್ನು ನಾನು ನೋಡಿಲ್ಲ. ಇವನ ರಾಜ್ಯಕ್ಕೆ "ಯಲಹಂಕ" ನಾಡೆಂದು ಹೆಸರಿತ್ತೇ ಅಲ್ಲದೆ ಇವನ ವಂಶ ದವರು ಅಲ್ಲಿ ವಾಸಮಾಡಿಕೊಂಡಿದ್ದುದಕ್ಕೆ ಇನ್ನೂವರೆಗೆ ಯಾವ ಆಧಾರವೂ ನನಗೆ ದೊರೆತಿಲ್ಲ. ಮುಖ್ಯವಾಗಿ ಇವರೂ, ಇವರ ಹಿರಿಯರೂ "**ಮಾಗಡಿ**" ಯಲ್ಲಿ ನೆಲೆಯಾಗಿದ್ದರೆಂದು ಈ ಹಿಂದೆ ಉದಹರಿಸಿರುವ ಸಾಕ್ಷ್ಯಗಳು ಹೇಳು ವುವು. ಜನತೆಯೂ ಈ ವಂಶದವರನ್ನು "**ಮಾಗಡಿ ಕೆಂಪೇಗೌಡ**"ರೆಂದೇ ಕರೆಯುವುದು. ಈಗ ಶಿಥಿಲವಾಗುತ್ತಿರುವ ವಿಶಾಲವಾದ "ಮಾಗಡಿ ಕೋಟೆ" ಯಲ್ಲಿ ಈ ವಂಶದವರಿರುತ್ತಿದ್ದರು. ಈ ಇಮ್ಮಡಿ ಕೆಂಪೇಗೌಡನ ಅಂಕಿತ ದಲ್ಲಿದ್ದ ನಾಡಿನಲ್ಲಿ, ಹಲವು ದುರ್ಗಗಳೂ, ಹಲವು ಊರಿನ ಕೋಟೆಗಳೂ ಈಗಲೂ ಉಳಿದಿವೆ.

"**ಮಾಗಡಿದುರ್ಗ**"ವೆಂದು, ಈ ವಂಶದ ಕಡೆಯರಾಜ "**ಕೆಂಪ ವೀರಪ್ಪಗೌಡ**"ನನ್ನು ಸೋಲಿಸಿದ, "ಕಳಲೆದೇವರಾಜ"ನ ತಮ್ಮ "ನಂಜ ರಾಜ"ನು ತನ್ನ "**ಕಕುದ್ಗಿರಿ ಮಹಾತ್ಮ್ಯ**"ದಲ್ಲಿ ಹೇಳಿರುವ "**ಸಾವನ ದುರ್ಗ**"ವು ಈ ವಂಶದವರ ಸ್ಥಿರವಾದ ರಾಜಧಾನಿಯಾಗಿತ್ತು. ಈ ಭಗ್ನ ನಗರದ ಅವಶೇಷಗಳು. ಈಗಲೂ, ಪಾಳುಬಿದ್ದಿರುವ "ವಿಜಯನಗರ"ದಂತೆ ಕಣ್ಣೆದುರಿಗೆ ನಿಂತಿದೆ. ಇದನ್ನು "**ನೆಲೆಪಟ್ಟಣ**"ವೆಂದೂ ಕರೆಯುತ್ತಾರೆ. ಸರ್ಕಾರದ ಲೆಕ್ಕಗಳಲ್ಲಿಯೂ ಕಳೆದುಳಿದಿರುವ ಈ ನಗರಭಾಗದ ಗ್ರಾಮವನ್ನು "ನೆಲಪಟ್ಟಣ"ವೆಂದೇ ಬರೆದಿದೆ. ಭವ್ಯವಾದ ಮತ್ತು ಸುಭದ್ರವಾದ ಕೋಟೆ-

ಕೊತ್ತಲಗಳುಳ್ಳ, ಈ ಸಾವನ ದುರ್ಗದ. ಬುಡದಿಂದ ದಕ್ಷಿಣಭಾಗದಲ್ಲಿ ಈ ಭಗ್ನನಗರದ ಪಾಳು ಕಟ್ಟಡಗಳೂ, ಕೋಟೆ ಕೊತ್ತಲಗಳೂ ದೇವಾಲಯಗಳೂ, ಸಾಕ್ಷಿಯಾಗಿ ನಿಂತಿವೆ. ಇದೇ ಈ "ಯಲಹಂಕವಂಶ"ದವರ ಮುಖ್ಯವಾದ ರಾಜಧಾನಿಯಾಗಿತ್ತು—

ಈ "ಸಾವನದುರ್ಗ"ವು ಹೊಯ್ಸಳ ನರೇಶ್ವರರ ಕಾಲದಲ್ಲಿ "**ಸಾಮಂತನದುರ್ಗ** ವೆಂದು ಕರೆಯಲ್ಪಡುತ್ತಿತ್ತೆಂದು ಕಾಣುತ್ತದೆ. ಕ್ರಿ. ಶ. ೧೧೫೦ ರ ಸುಮಾರಿನಲ್ಲಿ ಈ "ಸಾವನದುರ್ಗ"ಕ್ಕೆ ಪಶ್ಚಿಮದಲ್ಲಿ ಒಂದು ವಿಶಾಲವಾದ ನಗರವಿತ್ತು. ಅದರ ಅವಶೇಷಗಳು ಈಗಲೂ ಅಲ್ಲಲ್ಲಿ ಕಾಣಿಸುತ್ತಿದೆ. ಇದನ್ನು ಆ ಕಾಲದಲ್ಲಿ "**ಕಳಜಿ ಮಂಗಲ**" ವೆಂದು ಕರೆಯುತ್ತಿದ್ದರು ಈ ಊರೇ ಲೇಖಕನಾದ ನನ್ನ ಊರಾಗಿದೆ. ಈಗಲೂ ಈ ನಗರ ಮಧ್ಯಭಾಗದಲ್ಲಿರುವ ಊರನ್ನು "**ಕರಲಮಂಗಲ**" ವೆಂದೇ ಕರೆಯುತ್ತಾರೆ. ಹೊಯ್ಸಳ ನರಸಿಂಹ ದೇವನ "ಕರಲ ಮಂಗಲ"ದ ವೀರರಗುಡಿ ಶಿಲಾ ಶಾಸನದಲ್ಲಿ–

ಹೊಯ್ಸಳ ಶ್ರೀ ನಾರಸಿಂಹದೇವರು ಪ್ರಿಥ್ವೀರಾಜ್ಯಂಗೆಯ್ಯುತ್ತಿರಲು ವಿರೋಧಿಸಂವತ್ಸರದಲು "ಕಳಜಿಮಂಗಲದೂರ ಸಾವನ್ತಕೇಸರಿ ಈಜಿಯ [ನು] ಊರಳಿವಿನಲು ಕಳ್ಳಜಿಮಂಗಲದ ಪೂದುವ ಗವುಡನಮಗಂ ಅತ್ತಣಿಗ ಹೊಮ್ಮಾಯರಸು ಪುತ್ರಕುಲದೀಪಕಂ-ಇತ್ಯಾದಿ-

ಮಾಗಡಿ ನಂ ೧೪.

ಇದರಂತೆ ಈ ಕಳರಮಂಗಲದ ಅರಸನು ತನ್ನ ಕಾಲದಲ್ಲಿ ಹೊಯ್ಸಳ ಚಕ್ರವರ್ತಿಗಳ ಕೈ ಕೆಳಗಿದ್ದ ಸಾಮಂತರಲ್ಲೆಲ್ಲಾ ಮುಖ್ಯನಾಗಿ "**ಸಾವನ್ತ ಕೇಸರಿ** "ಯೆಂದು ಪ್ರಖ್ಯಾತನಾಗಿದ್ದನೆಂದು ತಾನಾಗಿಯೇ ಗೊತ್ತಾಗುವುದು. ಈ ಸಾವನ್ತಕೇಸರಿಯ ಹೆಸರಿನಿಂದಲೇ ಈ ದುರ್ಗವನ್ನು "**ಸಾವನ್ತ** ದುರ್ಗ" ವೆಂದು ಕರೆದಿದ್ದಿರಬೇಕೆಂದು ತೋರುತ್ತದೆ.

ಈ ಸಾವನ್ತದುರ್ಗದ ಹೆಸರು ವಿಜಯನಗರದ ಕೃಷ್ಣದೇವರಾಯನ ಕಾಲ (ಕ್ರಿ. ಶ. ೧೫೦೯–೧೫೨೯) ದಲ್ಲಿಯೂ ಸಾಮಂತ ದುರ್ಗವೆಂದೇ ಕರೆಯಲ್ಪಡುತ್ತಿತ್ತು. ಕೃಷ್ಣದೇವರಾಯನಾಶ್ರಯದಲ್ಲಿ ಮಹಾಭಾರತದ ಉತ್ತರ ಭಾಗದ ಮೊದಲಿನ "ಸ್ತ್ರೀಪರ್ವ"ವನ್ನು ಬರೆದ ಶ್ರೀನಿವಾಸ ಕವಿಯು "ಪ್ರಾಕ

ಟದ ಸಾಮಂತ ದುರ್ಗದ ಮಾಕುಟೇಪುರ ಸನ್ನಿಹಿತ ತಿರುಮಲೆಯ ಶ್ರೀರಂಗ" ನನ್ನು ಸ್ತುತಿಸುತ್ತಾ ಈ **ಮಾಕುಟೇ** ಅಥವಾ **ಮಾಗಡಿಯು** "ಸಾಮಂತ ದುರ್ಗ"ದ ಬಳಿಯಲ್ಲಿದೆಯೆಂದು ಹೇಳಿದ್ದಾನೆ. ಈ ಸಾವನ ದುರ್ಗವನ್ನೇ "ಯಲಹಂಕನಾಡು" ಪ್ರಭುಗಳು ತಮ್ಮ ರಕ್ಷಣೆಯ ನೆಲೆಯನ್ನಾಗಿ ಮಾಡಿ ಕೊಂಡು ಇದನ್ನು "ನೆಲೆ ಪಟ್ಟಣ"ವೆಂದು ಹೆಸರಿಸಿ ಕರೆದರು ಇವರು ಬೆಂಗ ಳೂರು ಮಾಗಡಿ ಶಿವಗಂಗೆ ದೇವಗಿರಿ (ಹುತ್ರಿದುರ್ಗ) ಗಳಲ್ಲಿಯೂ ತಮ್ಮ ನೆಲೆಯನ್ನಿಟ್ಟುಕೊಂಡಿದ್ದರೂ ಇವರ ಮುಖ್ಯವಾದ ನೆಲೆಯು **ಸಾವನದುರ್ಗ** ಅಥವಾ "**ನೆಲೆಪಟ್ಟಣ**"ವೇ ಆಗಿತ್ತು –

## ಕುಲ

ಇಮ್ಮಡಿ ಕೆಂಪೇಗೌಡನು, "**ಮೊರಸುಒಕ್ಕಲಿಗ**" ಕುಲದವನೆಂದು ಅವನ ಜಯಪ್ರಶಸ್ತಿಯಿಂದಲೇ ಗೊತ್ತಾಗುವುದು. ಈ "**ಮೊರಸುಒಕ್ಕಲಿಗ**" ರೆಂದು ಕರೆಯುವ ಒಕ್ಕಲಿಗರು "ಕರ್ನಾಟಕದ ಪ್ರಬಲ ಜನಸಂಖ್ಯೆಯುಳ್ಳ "**ಗಂಗಡಿಕಾರ**"ರಲ್ಲಿ ಒಂದು ಪ್ರಾಂತ ವಿಭಾಗದವರು. ಕನ್ನಡನಾಡಿನಲ್ಲಿ "**ಮೊರಸುನಾಡೆಂ**"ಬ ವಿಭಾಗದಲ್ಲಿ ಹೇರಳವಾಗಿ ವಾಸಮಾಡುತ್ತಿದ್ದ ಇವ ರನ್ನು ಮೊರಸಃ ಒಕ್ಕಲಿಗರೆಂದು ಕರೆದರೇ ಅಲ್ಲದೆ. "ಗಂಗಡಿಕಾರ"ರಿಗೂ ಇವರಿಗೂ ಯಾವ ಅಂತರ್ಭೇದವೂ ಇರುವುದಿಲ್ಲ. ಇವರಿವರಲ್ಲಿ ಭೋಜನ–ಪ್ರತಿಭೋಜನಗಳೂ, ಉಳಿದ ಸಾಮಾಜಿಕ ಸಮಾನತಾ ವ್ಯವಹಾರಗಳೂ ಭೇದಭಾವವಿಲ್ಲದೆ ನಡೆಯುವುವು. ವಿರಳವಾಗಿ ಗಂಗಡಿಕಾರರಿಗೂ–ಮೊರಸು ಒಕ್ಕಲಿಗರಿಗೂ ಹೆಣ್ಣುಕೊಟ್ಟು ತರುವ ಪದ್ಧತಿಯೂ ಉಂಟು. ಈ ಎಲ್ಲ ಕಾರಣಗಳಿಂದ ಈ ಮೊರಸು ಒಕ್ಕಲಿಗರು, ಗಂಗಡಿಕಾರ ಒಕ್ಕಲಿಗರೆಂಬುವ ದೊಡ್ಡ ಹಿಂಡಿನಲ್ಲಿ, ಒಂದು ಒಳಹಿಂಡೆಂದು ಹೇಳಬಹುದಾಗಿದೆ–

ಇಮ್ಮಡಿ ಕೆಂಪೇಗೌಡನು ಆಳಿಕೊಂಡಿದ್ದ "**ಯಲಹಂಕನಾಡ**"ನ್ನು ಮೊದಲು ಮೊದಲಿನ ದಿನಗಳಲ್ಲಿ "**ಮೊರಸುನಾಡೆಂದೇ**" ಶಾಸನಗಳಲ್ಲಿ ಹೇಳಿದೆ–ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ದೇವನಹಳ್ಳಿ, ಬೆಂಗಳೂರು ಹೊಸಕೋಟೆಗಳನ್ನು ಕೂಡಿಕೊಂಡಿದ್ದ, ಈ ನಾಡನ್ನು ಕುರಿತು–ಗಂಗರಾಜ

**"ಮಾಧವವರ್ಮನ,"** **ನಂದಿ** ದಾನಶಾಸನದಲ್ಲಿ, **"ಮೊರಸನಾಡು"** ಎಂದೇ ಬರೆದಿದೆ. ಅದರಲ್ಲಿ–

ಮಾಧವ ಮಹಾದಿರಾಜರ್ ಕೊಠದು ತಮ್ಮಾ ಕುಲಬ್ರಾಹ್ಮಣರ್ ಕ್ಕಂಗ ಮಂಗಲವರಕ್ಕೆ ಕೊಣ್ಣಿಂದ ನಾಮಗೋತ್ರಸ್ಯ ಗತ್ತಿವರ್ಮ ಪಡೆತಾದು "ಮೊರಸನಾಡ–" "ಪೆಪ್ಪುರ್ಸುರ್" ನಾಮಗ್ರಾಮ ಅದರ ತಟಕದಾ ವಟಿಗಯ್ ಕಡೆಕೊಟ್ಟ ಮೂಡಯ್‌ದಿಸೆಯುದು ಕಡೆ "ಕೊಟ್ಟೂರ್" ನಾಮಗ್ರಾಮಂ–(ಪಂಗ್ತಿ ೯–೧೨)

ಮೈಸೂರು ಆರ್ಕಿಲಾಜಿಕಲ್ ರಿಪೋರ್ಟ್ ೧೯೧೪ ಪು. ೨೭

ಮತ್ತು **"ಗಂಗರಾಜ ಪೆರ್ಮಾಡಿಯ"** ಬೆಂಗಳೂರು ತಾ|| ವರ್ತೂರು ಹೋಬಳಿ, ವರ್ತೂರು ಕೆರೆಕಟ್ಟೆ ಮೇಲಿನ ಶಿಲಾಶಾಸನದಲ್ಲಿ–

"ಸ್ವಸ್ತಿ ಶ್ರೀ ಪೆರ್ಮ್ಮಾನಡಿ ಪ್ರಿತಿವೀ–ರಾಜ್ಯಗೆಯೆ ನೊಳಂಬ ಶಿವಮಾರಂ" "ಮೊರಸುನಾಡ" ನಾಳು–ತ್ತಿರೆ ಮಹಬಲಿವಂಸ ನಿಜಪ–ನ ಮಗ ಅಣ್ಣಿಗ ಇಬ್ಬರರಸು–"

ಬೆಂಗಳೂರು ನಂ ೪೦.

ವಿಜಯನಗರದ ಕೃಷ್ಣದೇವರಾಯನ ಕ್ರಿ. ಶ. ೧೪೪೫ (ಕ್ರಿ.ಶ. ೧೫೨೩)ರ ದೊಡ್ಡಬಳ್ಳಾಪುರ ತಾಮ್ರಶಾಸನದಲ್ಲಿ—

"ಮೊರಸೇ ನಾಡಕ್ಕೇ" ಸಂಸ್ಥೇ–ಹೊಸಕೋಟಾಖ್ಯ ಸೀಮಗಂ।
ಸಂಸ್ಥಿತಂ ಪೂರ್ವದಿಗ್ಭಾಗೇ–ತತ್ರ ಗೋಪುರ ಪಲ್ಲಿತಃ ॥

ದೊಡ್ಡಬಳ್ಳಾಪುರ ನಂ ೩೦.

ಮತ್ತು ದೇವನಹಳ್ಳಿ ಚಿಕ್ಕಜಾಲದ ಶಾಸನದಲ್ಲಿಯೂ "ಮೊರಸ ನಾಡೆ"ಂದೇ ಹೇಳಿದೆ (ದೇವನಹಳ್ಳಿ ನಂ. ೫೭) ಹೀಗೆ ಮೊರಸುನಾಡಿನಲ್ಲಿದ್ದ ಈ ಒಕ್ಕಲಿಗರನ್ನು ಮೊರಸು ಒಕ್ಕಲಿಗರೆಂದು ಕರೆಯುವ ರೂಢಿ ಬಂತೇ ಹೊರತು, ಇದರಲ್ಲಿ ಮತ್ತೇನೂ ಭೇದವಿಲ್ಲ.

## ಭಾಷೆ

ಈಗಲೂ, ಮೊರಸು ನಾಡಿನಲ್ಲಿರುವ, ಮೊರಸು ಒಕ್ಕಲಿಗರ ಮನೆ ಮಾತು. ಕನ್ನಡ ನುಡಿಯೇ ಆಗಿದೆ. ಕೆಂಪೇಗೌಡನ ಮನೆಮಾತು

ಕನ್ನಡವೇ ಆಗಿತ್ತು. ಈಗಲೂ ಆ ಮನೆತನದವರ ಮನೆಮಾತು ಕನ್ನಡವೇ ಆಗಿದೆ. ಇದುವರೆಗೆ ದೊರೆತಿರುವ "ಯಲಹಂಕವಂಶ"ದವರ ಗಂಡು ಹೆಣ್ಣು ಗಳೆಲ್ಲರ ಹೆಸರೂ ಕನ್ನಡವೇ ಆಗಿದೆ. ಇದುವರೆಗೆ ಈ ಹಿಂದೆ ಉದಹರಿಸಿರುವ "ಯಲಹಂಕವಂಶ"ದವರ ಶಾಸನಗಳಲ್ಲಿ. ಇಮ್ಮಡಿ ಕೆಂಪೇಗೌಡನ ಕಾಲದಲ್ಲಿ ಬೇರೆಯವರು ದಾನಮಾಡಿದ ಎರಡು ಶಾಸನಗಳು ಮಾತ್ರ ತೆಲುಗಿನಲ್ಲಿವೆ. ಆದರೂ ಈ ತೆಲುಗು ಶಾಸನಗಳ ಲಿಪಿಯು ಕನ್ನಡದಲ್ಲಿರುತ್ತದೆ. ಕೆಂಪೇ ಗೌಡನ ವಂಶದ, ಹಿಂದಿನ-ಮುಂದಿನವರ ಎಲ್ಲಾ ಶಾಸನಗಳೂ ಕನ್ನಡದಲ್ಲಿ ರುತ್ತವೆ. ಈ ಹಲವಾರು ರೀತಿಯಿಂದ ನೋಡಿದರೂ, ಇಮ್ಮಡಿ ಕೆಂಪೇ ಗೌಡನ ಮನೆತನದವರ ಭಾಷೆಯು ಶುದ್ಧ ಕನ್ನಡವೇ ಆಗಿತ್ತೆಂದು ಗೊತ್ತಾಗು ವುದು.

ಯಲಹಂಕವಂಶದ ಗೌಡಧೊರೆಗಳಲ್ಲಿ ಈ ಇಮ್ಮಡಿ ಕೆಂಪೇಗೌಡನು ಅತ್ಯಂತ ಪ್ರಭಾವಶಾಲಿಯಾದ ದೊರೆಯೆಂದು ಇಲ್ಲಿ ಬರೆದಿರುವ ಸಂಕ್ಷಿಪ್ತ ವಿವರಣೆಯಿಂದ ಗೊತ್ತಾಗುವುದು.

## ಮುಮ್ಮಡಿ ಕೆಂಪೇಗೌಡ

ಇಮ್ಮಡಿ ಕೆಂಪೇಗೌಡನ ಜಯಪ್ರಶಸ್ತಿಯ ಮುನ್ನುಡಿಯಲ್ಲಿ, ಇವನ ಮುಂದಿನ ಪೀಳಿಗದವರ ವಿಷಯ ನಿರೂಪಣೆಗೆ ಕಾರಣವಿಲ್ಲದಿದ್ದರೂ, ಈ ಸಲುವಾಗಿ ಒಬ್ಬರಾದರೂ ಈ ವಂಶದವರ ಇತಿಹಾಸವನ್ನು ಸರಿಯಾಗಿ ಕಾಲ- ಮಾನ ವಿಚಾರಗಳೊಡನೆ ಬರೆದಿರುವುದಿಲ್ಲವಾದುದರಿಂದಲೂ, ಜನರಲ್ಲಿ ತಪ್ಪು ತಿಳುವಳಿಕೆಯು ಬೇರು ಬಿಟ್ಟಿರುವುದರಿಂದಲೂ, ಈ ವಂಶದವರ ಮುಂದಿನ ಪರಂಪರೆಯವರ ವೃತ್ತಾಂತವನ್ನು ಅತ್ಯಂತ ಸಂಕ್ಷೇಪವಾಗಿ ಬರೆಯುವ ಪ್ರಯತ್ನ ಮಾಡಿದ್ದೇನೆ.

ಇಮ್ಮಡಿ ಕೆಂಪೇಗೌಡನಿಗೆ, ಕೆಂಪಮ್ಮ-ಲಿಂಗಮ್ಮ ಎಂಬಿಬ್ಬರು, ಹೆಂಡತಿ ಯರು. ಇವರಲ್ಲಿ ಎರಡನೆಯ ಹೆಂಡತಿ, ಲಿಂಗಮ್ಮನಿಗೆ "ಇಮ್ಮಡಿ ಹಿರಿಯ ಕೆಂಪೇಗೌಡ"ನೆಂಬ ಮಗನಾಗಿದ್ದನೆಂದು ಇವನ ವೃಂತ್ತಾಂತವನ್ನು ಹಿಂದೆಯೇ ತಿಳಿಸಿದೆ-

ಹಿರಿಯ ಹೆಂಡತಿ ಕೆಂಪಮ್ಮನಿಗೆ "ಮುಮ್ಮಡಿ ಕೆಂಪೇಗೌಡ-ಹಲಸ ಕ್ಷೀರರೆಂಬ ಇಬ್ಬರು ಮಕ್ಕಳಾದರು. ಇವರಲ್ಲಿ ಹಿರಿಯನಾದ "ಮುಮ್ಮಡಿ ಕೆಂಪೇಗೌಡನು ಇಮ್ಮಡಿ ಕೆಂಪೇಗೌಡನ ಬಳಿಕ ರಾಜಗದ್ದುಗೆಯೇರಿದನು- ಈತನನ್ನು ಏಕಾಂಬರ ಶಾಸ್ತ್ರಿಯು ತನ್ನ "ವೀರಭದ್ರ ವಿಜಯ"ದಲ್ಲಿ "ಸಿಂಹಪರಾಕ್ರಮ"ನೆಂದೂ, ಯಶೋಕಾಯನೆಂದೂ ಬಗೆಬಗೆಯಿಂದ ಹೊಗಳಿರುತ್ತಾನೆ. ಈತನ ಸಲುವಾಗಿ ಅವನೇ ಬರೆದಿರುವ ನಾಲ್ಕು ವೃತ್ತ ಗಳನ್ನು ಕೆಳಗೆ ಬರೆಯುತ್ತೇನೆ-

ದುಗ್ಧಾಬ್ಧೇರ್ಲಹರೀ ಯಥಾ ಹಿಮಕರಂ ಶುಕ್ತಿರ್ಯಥಾ ಮೌಕ್ತಿಕಂ ।
ಶೌರ್ಯಶ್ರೀರ್ವಿಜಯಂ ಯಥಾಪ್ಯುಪನಿಷದ್ದೇವೀ ಪ್ರಬೋಧಂ ಯಥಾ ॥
ಧನ್ಯಾ ಸಾ ಸಮಸೂತ ಪುತ್ರಮನಘಂ "ಶ್ರೀ ಕೆಂಪಮಾಂಬಾಭಿಧಾ" ।
"ಶ್ರೀಮುಮ್ಮಡಿ ಕೆಂಪರಾಯ" ನೃಪತಿಂ ಸಿಂಹಸ್ಫುರದ್ವಿಕ್ರಮಂ ॥

ಯಸ್ಯಾಜ್ಞಾಂ ಶಿರಸಾ ವಹಂತಿ ಸಕಲಾಃ ಸಾಮಂತಭೂಮೀಶ್ವರಾಃ ।
ಯಸ್ಯಾಹುರ್ಲಿಖಿತಂ ವಿರಂಚಿ ಲಿಪಿವತ್ ವಿಸ್ರಂಭಣೀಯಃ ಬುಧಾಃ ॥
ದೃಷ್ಟಿರ್ಯಸ್ಯ ಪರಾಂಗನಾಸು ಪತಿತಾ ದೂರಂ ಪರಾವರ್ತತೇ ।
ತಸ್ಮಿನ್ಮುಮ್ಮಡಿ ಕೆಂಪರಾಯ ನೃಪತೇಃ ಧನ್ಯಃ ಕಿಮನ್ಯೋ ಭುವಿ ॥

ಪ್ರತಿಭಾ ವಿಬುಧಾಮಾತ್ಯೋ - ಬಲಸಾಹಸ ಹಸಿತ ವಿಕ್ರಮಾದಿತ್ಯಃ ।
ಸಜಯತಿ ವಿಚಿತ್ರಕೃತ್ಯೋ - ಮುಮ್ಮಡಿ ಕೆಂಪಾಹ್ವಯೋ ನೃಪೈಃ ಸ್ತುತ್ಯಃ ॥

ಜನಭರಣ ಧುರೀಣಃ - ಸರ್ವವಿದ್ಯಾ ಪ್ರವೀಣಃ ।
ಕರಕಲಿತ ಕೃಪಾಣಃ - ಕಾಮಿನೀ ಪಂಚಬಾಣಃ ॥

ಜಯತಿ ಮುಮಡಿ ಕೆಂಪಃ - ಛಾಯಯಾ ಧೂತಶಂಪಃ ।
ಪರಿಹೃತರಣ ಕಂಪಃ - ಪಾಲಿತ ಕ್ಷ್ಮಾ ನಿಲಿಂಪಃ ॥

ವೀರಭದ್ರವಿಜಯ ಉಲ್ಲಾಸ ೪.

ಈ ಮುಮ್ಮಡಿ ಕೆಂಪೇಗೌಡನು ತಂದೆಯಾದ ಇಮ್ಮಡಿ ಕೆಂಪೇಗೌಡ ನಿದ್ದಾಗಲೇ, ಬೆಂಗಳೂರನ್ನು ಆಕ್ರಮಿಸಿ ಆಳುತ್ತಿದ್ದ "ಷಹಜಿ"ಯನ್ನು ಆರೇಳು ಯುದ್ಧಗಳಲ್ಲಿ ಸೋಲಿಸಿ ಓಡಿಸಿದುದನ್ನೂ ಮತ್ತು ಮೈಸೂರು ದೊರೆ ಯಾದ "ಕಂಠೀರವ ನರಸರಾಜ"ನನ್ನು ಹಿಮ್ಮೆಟ್ಟಿಸಿ ಸೋಲಿಸಿದುದನ್ನೂ ಈ ಹಿಂದೆಯೇ ಬರೆದದ್ದಾಗಿದೆ.

ಇವನ ಮಗನಾದ ದೊಡ್ಡವೀರಪ್ಪಗೌಡನ ಕಾಲದ, ಏಕಾಂಬರ ಶಾಸ್ತ್ರಿಯು ಬರೆದಿರುವ "ವೀರಭದ್ರ ವಿಜಯ"ದಲ್ಲಿ-ಈ ಮುಮ್ಮಡಿ ಕೆಂಪೇ ಗೌಡನು, ತನ್ನ ಇಷ್ಟದೇವರಾದ ವೀರಭದ್ರಸ್ವಾಮಿಯ ಪ್ರಸಾದದಿಂದ ಭಕ್ತ ನೊಬ್ಬನಿಗೆ ಕಣ್ಣುಕೊಟ್ಟು ತಾನು "**ಸುಬ್ರಹ್ಮಣ್ಯಾಂಶ ಸಂಭೂತ**"ನೆಂದು ಪ್ರಸಿದ್ಧನಾದನೆಂದು ಹೇಳಿದೆ, **ಈ**ತನು ಮಹಾಭಕ್ತ ಶಿರೋಮಣಿಯೆಂದು ಪ್ರಸಿದ್ಧನಾಗಿದ್ದನು.

**ಮುಮ್ಮಡಿ** ಕೆಂಪೇಗೌಡನು ರಾಜನಾದ ಶ.ಕ. ೧೫೭೮ (೧೬೫೬) ರಲ್ಲಿ, ತನ್ನ ಇಷ್ಟ ದೇವರಾದ "**ಸಾವನದುರ್ಗದ ವೀರಭದ್ರಸ್ವಾಮಿ**"ಯ ಸನ್ನಿಧಿ ಯಲ್ಲಿ, ಹೆಬ್ಬಾರಯ್ಯನ ಮಗ ಶ್ರೀನಿವಾಸಯ್ಯಂಗಾರನಿಗೆ "ಕೋಟಗಾರ ಸಿದ್ದ ಪ್ಪನಹಳ್ಳಿ"ಯನ್ನು "ಶ್ರೀನಿವಾಸಪುರ"ವೆಂದು ಹೆಸರಿಟ್ಟು ದಾನಮಾಡಿದನು.

ಮುಮ್ಮಡಿ ಕೆಂಪೇಗೌಡನು' ಶಕ ೧೫೮೪ ರಲ್ಲಿ (ಕ್ರಿ. ಶ. ೧೬೬೭) "**ಕಾಶಿ**"ಯಲ್ಲಿ ಒಂದು ಮಠವನ್ನು ಕಟ್ಟಿಸಿ ಲಿಂಗಪ್ರತಿಷ್ಠೆ ಮಾಡಿಸಿ, **ಈ** ಮಠದ ಧರ್ಮಕ್ಕಾಗಿ "ಅಳುಲುಕುಪ್ಪೆ" ಗ್ರಾಮವನ್ನು ವಿಶ್ವೇಶ್ವರ ಪ್ರೀತಿಗಾಗಿ "ಅಕ್ಷಂತಲ ಮುದ್ದುಭಟ್ಟ"ನಿಗೆ ದಾನಮಾಡಿದನು.

ಶಕ ೧೫೯೬ರಲ್ಲಿ (ಕ್ರಿ. ಶ. ೧೬೭೪) ಕೆಂಪಸಾಗರ ಅಗ್ರಹಾರವನ್ನು ನಾನಾ ಬ್ರಾಹ್ಮಣರಿಗೆ ದಾನಮಾಡಿದನು. ಇದೇ ವರ್ಷವೇ "ಕೆರೆಕಟ್ಟೆದ ಚತಲದಸೆ ಭೋಯಿಗೆ" ಕೆಲಭೂಮಿಯನ್ನು ಉಂಬಳಿಯಾಗಿ ಕೊಟ್ಟನು, ಇನ್ನೂ ಅನೇಕ ಕೆರೆಕಟ್ಟೆ ದೇವಾಲಯಗಳನ್ನು ನಿರ್ಮಿಸಿದನು-

ಈ ಮುಮ್ಮಡಿ ಕೆಂಪೇಗೌಡನಿಗೆ, **ಬಸವಮ್ಮ - ತೋಟದಮ್ಮ - ಬೈಯಮ್ಮ**" ಎಂಬ ಮೂರು ಜನ ಹೆಂಡತಿಯರು, **ಭಗೀರಾವತಿ-ಜಪಾ ಮುದ್ದಿ**"ಯರೆಂಬ ಇಬ್ಬರು ಉಪಪತ್ನಿಯರಿದ್ದರು. ಹಿರಿಯ ಹೆಂಡತಿಯಾದ ಬಸವಮ್ಮನಲ್ಲಿ. "**ದೊಡ್ಡವೀರ-ಇಮ್ಮಡಿಕೆಂಪ**"ರೆಂಬಿಬ್ಬರೂ ಎರಡನೆಯ ಹೆಂಡತಿಯಾದ, ತೋಟದಮ್ಮನಲ್ಲಿ "**ಹಲಸ**"ನೂ, ಮೂರನೆಯ **ಹೆಂಡತಿ** ಬೈಯಮ್ಮನಲ್ಲಿ "**ಮುಮ್ಮಡಿಕೆಂಪ**"ನೆಂಬವನೂ ಮಕ್ಕಳಾದರು. ಮುಮ್ಮಡಿ ಕೆಂಪೇಗೌಡನ ಕಾಲದ ದೊರೆತ ಕಡೆಯ ಶಾಸನವು ಶಕ ೧೫೯೬ (ಕ್ರಿ. ಶ. ೧೭೭೪)ರ ಇವನ ತಂದೆಯಾದ ಇಮ್ಮಡಿ ಕೆಂಪೇಗೌಡನು. ಕ್ರಿ. ಶ. ೧೫೯೭ ರಿಂದ ಕ್ರಿ. ಶ. ೧೬೫೬ ರವರೆಗೆ ಸುಮಾರು ೫೯ ವರ್ಷಗಳಾಳಿದುದರಿಂದ

ಇವನಾಳಿಕೆಯು ಸಹಜವಾಗಿಯೇ ಕಡಿಮೆ ವರ್ಷಗಳಾಗಿವೆ- ಈ ಮುಮ್ಮಡಿ ಕೆಂಪೇಗೌಡನು ಇನನ ಮಗ ದೊಡ್ಡವೀರಪ್ಪಗೌಡನ ಆಳಿಕೆಯ ಮೊದಲ ವರ್ಷವಾದ ಕ್ರಿ. ಶ. ೧೬೮೧ ರವರೆಗೂ ೨೫ ವರ್ಷಗಳಷ್ಟು ಕಾಲ ಆಳಿದನೆಂದು ಹೇಳಬಹುದಾಗಿದೆ—

## ದೊಡ್ಡ ವೀರಪ್ಪಗೌಡ

ಮುಮ್ಮಡಿ ಕೆಂಪೇಗೌಡನ ಬಳಿಕ ಅವನ ಹಿರಿಯ ಹೆಂಡತಿಯ ಹಿರಿಯ ಮಗನಾದ "ದೊಡ್ಡವೀರಪ್ಪ ಗೌಡ"ನು ರಾಜಗದ್ದುಗೆಯೇರಿದನು. ಈತನು ತುಂಬಾ ಪರಾಕ್ರಮಿಯಾದ ರಾಜನೆಂದು ಏಕಾಂಬರ ಶಾಸ್ತ್ರಿಯು ವರ್ಣಿಸುತ್ತಾನೆ.

ದೊಡ್ಡ ವೀರಪ್ಪಗೌಡನು ಶಕ ೧೬೦೩ (ಕ್ರಿ. ಶ. ೧೬೮೧)ರಲ್ಲಿ ಮಾಗಡಿ ಹತ್ತಿರದ "ತಿರುಮಲಿ" ಯಲ್ಲಿರುವ "ರಂಗನಾಥ ದೇವಾಲಯ" ವನ್ನು ಪ್ರಾಕಾರಾದಿಗಳಿಂದ ವಿಸ್ತರಿಸಿ ಕಟ್ಟಿಸಿದನು. ಮತ್ತು ಇದರ ನೆನಪಾಗಿ "ತಿಮ್ಮಪ್ಪಯ್ಯಂಗಾರು" ಮೊದಲಾದ ೧೩ ಜನರಿಗೆ "ಕಲ್ಲಿಕೆರೆ-ಡೊಂಕನಪುರ" ಗಳನ್ನು ದಾನಮಾಡಿದನು.

ಶಕ ೧೬೦೬ರಲ್ಲಿ (ಕ್ರಿ. ಶ. ೧೬೮೪) ತನ್ನ ತಂದೆ ತಾಯಿಗಳಿಗೆ ಪುಣ್ಯವಾಗಲೆಂದು "ಶೀಗೆಕುಪ್ಪೆ"ಯನ್ನು ಶೃಂಗೇರಿಮಠಕ್ಕೂ "ಅರೆಬೇಡರ ಹಳ್ಳಿ" ಯನ್ನು ಸುಬ್ರಹ್ಮಣ್ಯಸ್ವಾಮಿಯ ಸೇವೆಗೂ ದಾನಮಾಡಿದನು. ಈ ರಾಜನು ಈತನ ಮಗನಾದ "ಕೆಂಪವೀರಪ್ಪ" ಗೌಡನ ಮೊದಲನೆಯ ಶಾಸನವಾದ ಶಕ ೧೬೧೯ನೆಯ (ಕ್ರಿ. ಶ. ೧೬೯೭) ವರ್ಷದವರಿಗೂ ರಾಜ್ಯಭಾರವನ್ನು ವಹಿಸಿದ್ದನೆಂದು ಹೇಳಬಹುದಾಗಿದೆ – ಇವನ ರಾಜ್ಯಭಾರದ ಕಾಲವು ಕ್ರಿ. ಶ. ಸು. ೧೬೮೧-೧೬೯೭ರ ವರೆಗೂ ಸುಮಾರು ೧೬ ವರ್ಷಗಳಿದ್ದಿರಬೇಕೆಂದು ಹೇಳಬಹುದಾಗಿದೆ-

## ಕೆಂಪವೀರಪ್ಪಗೌಡ

ದೊಡ್ಡವೀರಪ್ಪಗೌಡನ ಹೆಂಡತಿಯಾದ "ಮುದ್ದುವೀರಮ್ಮ"ನ ಗರ್ಭದಲ್ಲಿ ಈ "ಯಲಹಂಕ ವಂಶ"ದ ಕಡೆಯ ದೊರೆಯಾದ "ಕೆಂಪ

**ವೀರಪ್ಪಗೌಡ**"ನು ಮಗನಾಗಿ ಹುಟ್ಟಿದನು. ಸಾಹಸಿಯಾದ ಈ ಗೌಡನು ಶಕ ೧೬೧೯ರಲ್ಲಿ ನಾನಾಗೋತ್ರದ ಬ್ರಾಹ್ಮಣರಿಗೆ ಭೂದಾನ ಮಾಡಿದನು. ಶಕ ೧೬೨೦ರಲ್ಲಿ ಮಂಗಳೂರು ಜಿಲ್ಲೆ "**ಸುಬ್ರಹ್ಮಣ್ಯ ದೇವಾಲಯ**"ದ ಉಪಯೋಗಕ್ಕಾಗಿ ಮಾಗಡಿ ಹತ್ತಿರ "**ಸುಬ್ಬರಾಯ ಬೇಡರಹಳ್ಳಿ**" ಯನ್ನು ದಾನ ಮಾಡಿದನು. ಶಕ ೧೬೩೪ರಲ್ಲಿ ಮಾಗಡಿ ಸೋಮೇಶ್ವರ ದೇವಾಲಯಕ್ಕೆ ಜುಟ್ಟನಹಳ್ಳಿ-ಶಿರುಪತಿ ಹಳ್ಳಿಗಳನ್ನು ದಾನಮಾಡಿದನು. ಇದೇ ಶಕ ೧೬೩೪ರಲ್ಲಿ ಮಾಗಡಿ ಹತ್ತಿರದ "ಮಾಯನಾಯ್ಕನಹಳ್ಳಿ" ಯನ್ನು ನಾನಾ ಗೋತ್ರ ಸೂತ್ರಗಳ ಬ್ರಾಹ್ಮಣರಿಗೆ ದಾನಮಾಡಿದನು. ಶಕ ೧೬೩೫ರಲ್ಲಿ ಮಾಗಡಿ ಹತ್ತಿರದ "ಜಡೆ-ಡೆಯರ ಮಠಕ್ಕೆ ಶಿವಯೋಗಿ" ಅಣ್ಣಾಜಿ-ಹುಚ್ಚಣ್ಣ" ಇವರಿಗೆ ಭೂದಾನ ಮಾಡಿದನು. ಮತ್ತು ಇದೇ ೧೬೩೫ರಲ್ಲಿ ದೇವಗಿರಿಯೆಂಬ "ಹುತ್ರಿದುರ್ಗ" ದ ಬಳಿಯಲ್ಲಿರುವ "ಬೆಟ್ಟಹಳ್ಳಿ" ಮಠದ ಉಪಯೋಗಕ್ಕಾಗಿ "ಎಲಚ ವಾಡಿ" ಬಳಿಯಲ್ಲಿ ಭೂದಾನ ಮಾಡಿದನು.

ಇದೇ ಶಕ ೧೬೩೫ರಲ್ಲಿ ಸೋಮೇಶ್ವರ ದೇವಾಲಯದ ಉಪಯೋಗಕ್ಕಾಗಿ "ಉದ್ದುರಳನಹಳ್ಳಿ" ಯನ್ನು ದಾನಮಾಡಿದನು. ಈ ದಾನಶಾಸನಡಲ್ಲಿಯೂ ಇತರ ಶಾಸನಗಳಲ್ಲಿಯೂ ಈ ಪ್ರಭು ಕೆಂಪವೀರಪ್ಪನನ್ನು ಸ್ತುತಿಸುವ ಈ ಸಂಸ್ಕೃತಭಾಷೆಯ ಪದ್ಯವಿದೆ-

ಸ್ವಸ್ತಿಶ್ರೀ ಯಲವಂಕ ವಂಶ ತಿಲಕ [ಃ] ಶ್ರೀ ಕೆಂಪಭೂಪಾತ್ಮಜ [ಃ] ।
ಶ್ರೀ ವೀರಕ್ಷಿತಿಪಾಲಸೂನು "ರಖಿಲಕ್ಷ್ಮಾಮಂಡಲಾಧೀಶ್ವರಃ" ॥
"ಶ್ರೀಮುಮ್ಮಡಿ ಕೆಂಪವೀರ ನೃಪತೇಃ" ಸೋಮೇಶ್ವರ ಸ್ಥಾಪಕೋ ।
ಜೀಯಾತ್ಸಜ್ಜನ ಪಾಲನಾಯ ರಚಿತಃ ಕ್ಷೇಮಾಗ್ರಹಾರಂ ಶ್ಚಿರಂ ॥

ಎಂದು ಹೊಗಳಿದೆ ಇಲ್ಲಿ ಹೇಳಿರುವ "ಅಖಿಲಕ್ಷ್ಮಾಮಂಡಲಾಧೀಶ್ವರ"ನೆಂಬ ಮಾತನ್ನು ನಾವು ಒಪ್ಪುವುದಕ್ಕಾಗದಿದ್ದರೂ ಅವನ ರಾಜ್ಯವು ವಿಶಾಲವಾಗಿದ್ದಿತೆಂದು ಒಪ್ಪಿಕೊಳ್ಳುವುದರಲ್ಲಿ ಯಾವ ಆತಂಕವೂ ಇರುವುದಿಲ್ಲ. ಈ ಪ್ರಪಂಚದಲ್ಲಿ ಯಾವರಾಜನೂ "ಅಖಿಲಕ್ಷ್ಮಾ ಮಂಡಲಾಧೀಶ್ವರ" ನಾಗಿ ಇರಲೇ ಇಲ್ಲ. ದೊಡ್ಡ ರಾಜ್ಯಪತಿಗಳು ಹೀಗೆ ಹೇಳಿಕೊಳ್ಳುವುದು ಪದ್ಧತಿಯಾಗಿತ್ತು-

ಇಲ್ಲಿಯವರೆಗೆ "ಯಲಹಂಕ ವಂಶ"ದ ದೊರೆಗಳು ವಿಜಯನಗರದವ ಅಂಕಿತದಲ್ಲಿ ಸ್ವತಂತ್ರರಾಗಿಯೇ ಆಳಿಕೊಂಡಿದ್ದರು. ಈ ನಡುವೆ ಮೈಸೂರರಸ ಮಾಗಡಿ ರಾಷ್ಟ್ರವನ್ನು ಗೆದೆಯುವ ಹಲವು ಪ್ರಯತ್ನ ಮಾಡಿದ್ದರು. ಹಲ ಯುದ್ಧಗಳನ್ನು ಇವನ ತಂದೆಯ ಕಾಲದಿಂದಲೂ ಸಾಗಿಸಿ ಗೆಲವು-ಸೋಲ ಗಳನ್ನು ಅನುಭವಿಸಿಯೂ ಇದ್ದರು.

ಶಕ ೧೬೩೬ (ಕ್ರಿ. ಶ. ೧೭೧೪) ರಲ್ಲಿ ಮೈಸೂರು ದೊರೆಯಾದ ಒಂ ನೆಯ ಕೃಷ್ಣರಾಜನು ಈ "ಕೆಂಪವೀರಪ್ಪಗೌಡ" ನನ್ನು ಯುದ್ಧದಲ್ಲಿ ಗೆದ್ದನ ಈ ಹಿಂದಿನ ವರ್ಷವೇ ಕೃಷ್ಣರಾಜನಿಗೂ-ಕೆಂಪವೀರಪ್ಪಗೌಡನಿಗೂ ಯುದ್ಧ ವಾದಂತೆ ಗೊತ್ತಾಗುವುದು. ಶಕ ೧೬೩೫ನೆಯ ವಿಜಯಸಂವತ್ಸರ ಶ್ರಾವಣ ಶು|| ೧೦ರಲ್ಲಿ ಕೆಂಪವೀರಪ್ಪಗೌಡನು ಮಾಗಡಿ ಜಡೆವಡೆಯರ ಮಠಕ್ಕೆ ದಾ ಮಾಡಿದಾಗ ಮೈಸೂರವರ ಅಂಕಿತದಲ್ಲಿರಲಿಲ್ಲ. ಇದೇ ಶಕ. ೧೬೩೫ ನೆಯ ವಿಜಯ ಸಂ|| ಮಾಘ ಶು|| ೭ ರಲ್ಲಿ, ಕೆಂಪವೀರಪ್ಪಗೌಡನ ರಾಜಧಾನಿಗಳಾ ಸಾವನದುರ್ಗದ ನೆಲೆಪಟ್ಟಣ, ಹುತ್ರಿದುರ್ಗದ ರಾಜನಗರ ದೇವಗಿರಿಗ ನಗರ ರಕ್ಷಕರಾದ "**ಜವರಯ್ಯ-ದೇವರಾಜಯ್ಯ**" ಇವರುಗಳು. ಮೈಸೂರ ಒಂದನೆಯ ಕೃಷ್ಣರಾಜನ ಅಂಕಿತದಲ್ಲಿ, ಬೆಟ್ಟಹಳ್ಳಿ ಮಠಕ್ಕೆ ದಾನಮಾಡಿ ವುದರಿಂದ, ಈ ನಗರ ರಕ್ಷಕರಾದ "ಜವರಯ್ಯ-ದೇವರಾಜಯ್ಯ" ಇವರ ಒಳಗೊಳಗೇ ಮೈಸೂರವರ ಪರವಾಗಿ ನಗರಗಳನ್ನು ಒಪ್ಪಿಸಿ ಕೊಟ್ಟುದರಿಂ ಕೆಂಪವೀರಪ್ಪಗೌಡನಿಗೆ ಸೋಲಾಯಿತೆಂದು ಊಹಿಸಬಹುದಾಗಿದೆ. ಹೀಗಾ ಕೆಂಪವೀರಪ್ಪಗೌಡನಿಗೂ-ಮೈಸೂರು ಒಂದನೆಯ ಕೃಷ್ಣರಾಜನಿಗೂ ನಡೆ ಯುದ್ಧವು ಶಕ ೧೬೩೫ ನೆಯ ಶ್ರಾವಣ ಶು|| ೧೦ ರಿಂದ ಹಿಡಿದು, ಮಾಘ ಶು|| ೭ ರೊಳಗಾಗಿ ನಡೆದಿದ್ದಿರಬೇಕೆಂದು ಗೊತ್ತಾಗುವುದು. ಈ ಯುದ್ಧ ದಲ್ಲಾದ ಪರಾಭವದ ಫಲವಾಗಿ ಕೆಂಪವೀರಪ್ಪಗೌಡನು. ಮೈಸೂರಿನ ಕೃಷ್ಣ ರಾಜನ ಅಧೀನವನ್ನು ಒಪ್ಪಿಕೊಂಡು ಅವನ ಅಂಕಿತದಲ್ಲಾಳತೊಡಗಿದನು.

ಶಕ ೧೬೩೬ (ಕ್ರಿ. ಶ. ೧೭೧೪)ರಲ್ಲಿದೇ ಕೆಂಪವೀರಪ್ಪಗೌಡನು ಮೈಸೂ ರಿನ ಒಂದನೆಯ ಕೃಷ್ಣರಾಜನ ಅಧೀನನೆಂದು ಒಪ್ಪಿಕೊಂಡು ಬೆಟ್ಟಹಳ ಮಠಕ್ಕೆ ಕೆಲಭೂಮಿಯನ್ನು ದಾನಮಾಡಿದನು. ಕೆಂಪವೀರಪ್ಪಗೌಡನನ್ನು ಈ ಯುದ್ಧದಲ್ಲಿ ಸೋಲಿಸಿದವನು. "**ಕಳಲೆ ದೇವರಾಜ**"ನೆಂಬ ಒಂದನೆಯ

ಕೃಷ್ಣರಾಜನ ಸೇನಾ ನಾಯಕ. ಇವನ ತಮ್ಮನೇ ತಾನು "**ಕಕುದ್ಗಿರಿ ಮಹಾತ್ಮ**"ವೆಂಬ ಗ್ರಂಥವನ್ನು ಕ್ರಿ. ಶ. ೧೭೪೦ರಲ್ಲಿ ಬರೆದಿರುತ್ತಾನೆ. ಈ ಗ್ರಂಥದಲ್ಲಿ ಪ್ರತಿ ಅಧ್ಯಾಯದ ಕಡೆಯಲ್ಲಿಯೂ—

"ಮಹಿಶೂರ ಸೇನಾಪತಿ ಕಳಲೆ ದೊಡ್ಡರಾಜಸುತ ವೀರರಾಜನಂದನ ದಳಪತಿ ದೇವರಾಜಾನುಜ, ನಂಜರಾಜಯ್ಯನು ಕನ್ನಡಿಸಿ ಪೇಳಿದೀಕಾವ್ಯ ದೊಳು............... ಅಧ್ಯಾಯ"

ಎಂದು ಬರೆದಿರುತ್ತಾನೆ. ಇದರ ಮೊದಲನೆಯ ಅಧ್ಯಾಯದಲ್ಲಿ ತನ್ನ ಹಿಂದಿನ ವಂಶವೃತ್ತಾಂತವನ್ನು ವಿವರಿಸಿಯಾದಮೇಲೆ, ವೀರನಾದ ತನ್ನ ಅಣ್ಣ "**ದೇವರಾಜ**"ನನ್ನು ಹೊಗಳುತ್ತಾ—

ಅಗ್ರಜಂ "ದೇವರಾಜೇಂದ್ರ" ಸೇನಾನಾಥ ।
"ನುಗ್ರಬಲ ಪೌರುಷ ಪರಾಕ್ರಮ ಸುಸಾಹಸ [ಸ] ।
ಮಗ್ರನಂ ಗೆಲ್ದು "ಮಾಗಡಿ ದುರ್ಗ ರಾಷ್ಟ್ರಮಂ"
ನೆಗ್ಗು ಬಡಿದಹಿ [ತ] ತತಿಯಂ ॥
ಉಗ್ರಶಾಸನನಾಗಿ ಪೇರ್ಮೆಯಿಂದರಲಾಗ ।
ವಿಗ್ರಹಕ್ಕೆಳಸಿಯುವ ನಲ್ ಬರಲ್ ರಿಪುಬಲ ಸ ।
ಮಗ್ರಮಂ ಸಮರದೊಳು ತರಿದಾಕ್ಷಣಮುದದ್ವಿರದ [ವ] ದಿಕ್ಷುವಿನಂದದಿಂ ॥
ಪುರ್ವೃತ್ತ ಮತ್ತಯವನಾಹಿ ವಿಹಗಾಧಿಪಂ ।
ಗರ್ವಿತ ಮರಾಟಕರಿಪಾಟನ ಮೃಗಾಧಿಪಂ ।
ಸರ್ವ ಮಹಿಶೂರ ಸೇನಾಸಮುದ ಯಾಧಿಪಂ ಸತ್ಕವಿ ಸ್ತೋತ್ರಪಾತ್ರ ॥
ಸ (ಶ) ರ್ವಂ ನಗಾತ್ಮ ಜಾಪತಿ ಚರಣಸೇವಕಂ ।
ದುರ್ವಹ ಮಹೀಭರಣ ನಿರ್ವಹಣ ಸಾಧಕಂ ।
ಪರ್ವತಾಧೀಶ ಸಮಧೈರ್ಯ ನನುಪಮವೀರ-ದೇವದಳಪತಿ ಮೆರೆದನೂ ॥
ಒಂದು ದಿನ ದೇವನೃಪನನುಜನಾದೆನ್ನ ಸಭೆ ।
ಗಂದದಿಂ ಬಂದು ಸಾಮಂತ ಸಚಿವ ಬುಧ ।
ಸಂದೋಹ ಮತ್ಯಂತ ಸಂತೋಷದಿಂ ವಿಜಯನಾಗಿಬಾಳೆಂದು ಪರಶಿ ॥

ಇಂದು ವಂಶಲಲಾಮ ಸಂಗರಾಂಗಣಭೀಮ।
ಮಂದಹಾಸೋಲ್ಲಸದರನ (?) ನಂಜಕ್ಷಿತೀಪ।
ತಿಂದು ಕಕುಧ [ರ] ಣಿ ಧರಮಹಿಮೆಯಂ ಕನ್ನಡಿಸಿ
ಪೇಳೆಂದು ನುತಿಗೈದನೂ ॥ ೯ ॥

ಕಕುದ್ಗಿರಿ ಮಾಹಾತ್ಮ್ಯ, ಸಂಧಿ ೧ ಪದ್ಯ ೭, ೮, ೯.

ಮೈಸೂರು ಓರಿಯಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್ ಕೆ. ನಂ ೧೫೬.

ಈ ನಂಜರಾಜನ ಹೇಳಿಕೆಯಂತೆ "**ಮಾಗಡಿ ದುರ್ಗರಾಷ್ಟ್ರ**"ವನ್ನು ಮೊದಲು ಬಾರಿಗೆ ನೆಗ್ಗುಬಡಿದು ಉರುಳಿಸಿಬಿಟ್ಟವನು "**ದೇವರಾಜ**"ನೆಂಬ ಕಳಲೆವಂಶದ ದಳಪತಿಯೆಂದು ಗೊತ್ತಾಗುವುದು. ಈ ದೇವರಾಜನ ವಿಜಯವು ಶಕ ೧೬೩೬ (ಕ್ರಿ. ಶ. ೧೭೧೪-)ರಲ್ಲೇ ಆಗಿದ್ದಿತೆಂದೂ, ಇದು ಮೈಸೂರು ಒಂದನೆಯ ಕೃಷ್ಣರಾಜನ ಆಳಿಕೆಯ (ಕ್ರಿ ಶ. ೧೭೧೪-೩೨) ಮೊದಲನೆಯ ವರ್ಷವೇ ನಡೆನ ಘಟನೆಯೆಂದೂ ಖಚಿತವಾಗಿ ಗೊತ್ತಾಗುವುದು-ಇಲ್ಲಿ ನಂಜರಾಜನು ತನ್ನ ಕಾಲದಲ್ಲೇ ನಡೆದ, ಅದೂ ತಮ್ಮಣ್ಣನು ಗೆದ್ದ ಯುದ್ಧಜಯ ವೃತ್ತಾಂತದಲ್ಲಿ "**ಮಾಗಡಿರಾಜ್ಯ**"ವನ್ನು **ಮಾಗಡಿ ದುರ್ಗರಾಷ್ಟ್ರ**"ವೆಂದೂ, ಇದರ ಅರಸ (ಕೆಂಪವೀರಪ್ಪಗೌಡ)ನನ್ನು—**ಉಗ್ರ ಬಲ ಪೌರುಷ ಪರಾಕ್ರಮ, ಸುಸಾಹಾಸಸಮಗ್ರ**"ನೆಂದೂ ವರ್ಣಿಸಿರುವುದನ್ನು ನೋಡಿದರೆ. ಈ ಕೆಂಪವೀರಪ್ಪಗೌಡನ ರಾಜ್ಯವ್ಯಾಪ್ತಿ-ಬಲಗಳು ಅತಿಶಯವಾಗಿದ್ದವೆಂದು ಗೊತ್ತಾಗುವುದು. ಮತ್ತು ಕೆಂಪವೀರಪ್ಪಗೌಡನು. ತನ್ನ ದಾನಶಾಸನಗಳಲ್ಲಿ ಅತಿಶಯ ರೀತಿಯಿಂದ ತನ್ನನ್ನು "**ಅಖಿಲಕ್ಷ್ಮಾಮಂಡಲಾಧೀಶ್ವರ ಮಹಾಮಂಡಲೇಶ್ವರ**"ನೆಂದು ಹೇಳಿಕೊಳ್ಳುವಷ್ಟು ಪ್ರಬಲನಾಗಿದ್ದನೆಂದು. ಈ ರಾಜನನ್ನು ಗೆದ್ದ ಇವನ ವಿರೋಧಿಗಳ ಹೇಳಿಕೆಯಿಂದಲೇ ಗೊತ್ತಾಗುವುದು.

ಮೈಸೂರರಸರು ಮಾಗಡಿ ದೊರೆಗಳನ್ನು ಕೆಣಕುತ್ತಲೇ ಇದ್ದರು. ಮೈಸೂರು ದೊರೆಗಳಲ್ಲಿ ಪ್ರಸಿದ್ಧನಾದ ಚಿಕ್ಕದೇವರಾಜನ ಅಣ್ಣದೇವರಾಜನು ಮಾಗಡಿ ರಾಜ್ಯದ ಮೇಲೆ ಯುದ್ಧಮಾಡುತ್ತಾ ಕುಣಿಗಿಲ ತಾ॥ ಬಾಣಗೆರೆ ವರೆಗೂ ಬಂದಿದ್ದನೆಂದು ಒಂದು ಶಾಸನಾಧಾರವು ಹೀಗೆ ಹೇಳುವುದು. ಶಕ. ೧೬೯೨ (ಕ್ರಿ. ಶ. ೧೬೭೦)ರ ಸಾಧಾರಣ, ಸಂ॥ ಮಾಘ ಶು॥ ೨ ಸೋಮವಾರ ಬರೆದ ಕುಣಿಗಲು ತಾ॥ ಬಾಣಗೆರೆ ಶಾಸನದಲ್ಲಿ—

ಮೈಸೂರು ದೇವರಾಜ ವಡೆಯುರವರ ಕುಮಾರ ದೇವರಾಜ ವಡೆಯುರು— ನಮಗೆ ಖಡ್ಗಾಗ್ರ ಪ್ರತಾಪದಿಂ ಸ್ವಾರ್ಜಿತವಾಗಿ ಬಂದ ಕುಣಿಗಿಲ ಹೋಬಳಿ ಕೊತ್ತಂಗೆರೇ ಸ್ಥಳಕ್ಕೆ ಸಲ್ಲುವ "ಬಾಣಗೆರೆ ಗ್ರಾಮುವನ"—

ಕುಣಿಗಿಲು ನಂ ೪.

ದಾನಮಾಡಿದ್ದಾನೆ. ಕ್ರಿ. ಶ. ೧೬೮೬ ರಲ್ಲಿ ಚಿಕ್ಕದೇವರಾಜನು ಬೆಂಗಳೂರು ಜಿಲ್ಲೆ ಕಾನಕಾನಹಳ್ಳಿಯುವರೆಗೂ ಮುನ್ನುಗ್ಗಿದ್ದನೆಂದು ಅವನೆರಡು (ಕಾನಕನಹಳ್ಳಿ ನಂ ೯೪-೯೧) ಶಾಸನಗಳು ಹೇಳುವುವು ಈ ಚಿಕ್ಕದೇವರಾಜನ ಶ್ರೀರಂಗಪಟ್ಟಣ ತಾ॥ ತೊಂಡನೂರು ಲಕ್ಷ್ಮೀನಾರಾಯಣ ದೇವಾಲಯುದ ದಾನಶಾಸನದಲ್ಲಿ-ಇವನನ್ನು ಸ್ತುತಿಸುತ್ತಾ—

ತಾಳಗ್ರಾಹಿ ವೃತ್ತ —

ಒಂದು ದೆಶೆಯೊಳುತ್ತುರುಕ ರೊಂದು ಕಡೆಯೊಳ್ "ಮರಸ"
ರೊಂದೆಡೆಯೊಳಾರೆಯುರ ಬೃಂದ ಮಳಲಿಂದೇ ।
ರೊಂದು ಬಳಿಯೊಳ್ತಿಗುಳ ರೊಂದಿರವಿನೊಳ್ಕೊಡಗ
ರೊಂದು ಕೆಲದೊಳ್ ಮಲೆಗರೊಂದುವೆರೆದೆಲ್ಲರ್ ॥
ಸಂದಣಿಸಿ ಕಾಳಕಕೆ ಮುಂದುವರಿವನ್ನುಮಥಟಂದವರ ಘಟ್ಟುಗಳ
ಪಂದಲೆಗಳಂ ದಿ।
ಗ್ಬೃಂದ ಬಲಿಯಿತ್ತು ಗೆಲವಿಂದೆ ಚಿಕದೇವ ನೃಪ ನಂದಮಿಗೆ
ಪೇರ್ಜಸಮನೊಂದಿ ಸೊಗವಾಳ್ದಂ ॥

ಶ್ರೀರಂಗಪಟ್ಣ ನಂ. ೬೪.

ಚಿಕ್ಕದೇವರಾಜನಾಳಿಕೆ(ಕ್ರಿ. ಶ. ೧೬೭೩-೧೭೦೩) ಯಾದ ಮೇಲೆಯೂ ಮೈಸೂರರಸರು ಮಾಗಡಿಯು ಅರಸರನ್ನು ಕೆಣಕುತ್ತಲೇ ಇದ್ದರು. ಚಿಕ್ಕದೇವ ರಾಜನ ಮಗನಾದ ಇಮ್ಮಡಿ ಕಂಠೀರವನರಸರಾಜನು (ಕ್ರಿ. ಶ. ೧೭೦೪-೧೭೧೪) ಬೆಂಗಳೂರುವರೆಗೂ ಮಾಗಡಿ ರಾಜ್ಯದಲ್ಲಿ ಮುನ್ನುಗಿ ಬಂದಿದ್ದನೆಂದು ಅವನ ಶಕ ೧೬೨೭ (ಕ್ರಿ. ಶ. ೧೭೦೫)ರ ಪಾರ್ಥಿವ ಸಂವತ್ಸರದಲ್ಲಿ ಬರೆದ ಬೆಂಗಳೂರು ತಾ॥ ಕೊತ್ತನೂರು ಊರ ಬಾಗಿಲಿನಲ್ಲಿರುವ ಶಿಲಾ ಶಾಸನದಲ್ಲಿ-

ಮಹಿಶೂರ ನಗರದ ದೇವರಾಜ ವಡೇರೈಯುನ ಪೌತ್ರ ಚಿಕ್ಕದೇವ ಮಹಾರಾಜ ವಡೇರೈಯುನ ಪುತ್ರ ಕಂಠೀರವ ನರಸರಾಜ ವಡೇರಯ್ಯ—

ಬೆಂಗಳೂರು ನಂ ೧೪೧

ನೆಂದು ಹೇಳಿಕೊಂಡು ಕೆಲದಾನ ಮಾಡಿದ್ದಾನೆ–ಈ ಸಂಗತಿಗಳನ್ನೆಲ್ಲಾ ನೋಡಿದರೆ ಮಾಗಡಿ ಅರಸರುಗಳು ಹಲವುಯುದ್ಧಗಳಲ್ಲಿ ಕಾದಾಡಬೇಕಾಗಿ ಬಂದಿದ್ದಿತೆಂದು ತಾನಾಗಿಯೇ ಗೊತ್ತಾಗುವುದು. ಈ ಹಲವು ಹೋರಾಟ ಗಳಲ್ಲ ಕಡೆಗೆ ಕೆಂಪವೀರಪ್ಪಗೌಡನು ಶಕ ೧೬೩೬ ಅಥವಾ ಕ್ರಿ. ಶ. ೧೭೧೪ ರಲ್ಲಿ ಮೈಸೂರು ಒಂದನೆಯ ಕೃಷ್ಣರಾಜನಿಗೆ ಸೋತು ಅವನ ಅಧೀನ ರಾಜ ನೆಂದು ಒಪ್ಪಿಕೊಂಡನು –

ಇದಾದ ಮೇಲೆ ಕೆಂಪವೀರಪ್ಪಗೌಡನು ಮೂರನೆಯುವರ್ಷವೇ ಮೈಸೂರ ವರನ್ನು ಹಿಂದಕ್ಕಟ್ಟಿ ಸ್ವತಂತ್ರನಾಗಿ "**ಮಹಾಮಂಡಲೇಶ್ವರ**" ನೆಂಬ ಬಿರುದಿ ನಿಂದ ಆಳತೊಡಗಿದನೆಂದು ಅವನ ಮಾಗಡಿ ಸೋಮೇಶ್ವರ ದೇವಾಲಯದ ಶಿಲಾ ಶಾಸನದಲ್ಲಿ ಹೇಳಿದೆ. – ಇದು ಶಕ ೧೬೩೪ (ಅಲ್ಲ ೧೬೩೭) ಮನ್ಮಥ ಸಂ॥ ವೈಶಾಖ ಬಹು ೭ ರಲ್ಲಿ ಬರೆದದ್ದು ಇದರಲ್ಲಿ –

> ಸ್ವಸ್ತಿ ಮಹಾಮಂಡಲೇಶ್ವರ............ವಂಸ........ಸವಗೆ............ಸದಾಶಿವ ಗೋತ್ರಗ....ಯಲಹಂಜ್ಞ(ಕ) ನಾಡಪ್ರಭುಗಳಾದ ಮುಂಮಡಿ ಕೆಂಪವೀರ ಪ್ರಭುಗ ಳಪೌತ್ರರಾದ........[ದೊಡ್ಡವೀರಪ್ರಭುಗಳ] ಪುತ್ರರಾದ ಸಂಭವ ನಾಗ ಮುಂಮಡಿ ಕೆಂಪವೀರಪ್ಪಗೌಡರವರು —
>
> ಬೆಂಗಳೂರು ಸಪ್ಲಿಮೆಂಟ್ ನಂ. ೯೧

ಇದರಂತೆ ಕೆಂಪವೀರಪ್ಪಗೌಡನು ಕ್ರಿ. ಶ. ೧೭೧೫ ರಲ್ಲಿಯೇ ಸ್ವತಂತ್ರ ನಾಗಿ ಮೈಸೂರವರನ್ನು ಹಿಂದಕ್ಕೆ ಓಡಿಸಿ ಬಿಟ್ಟನೆಂದು ಗೂತ್ತಾವುದು. ತಿರುಗಿ ಮೈಸೂರಿನ ಕೃಷ್ಣರಾಜನು ಕ್ರಿ. ಶ. ೧೭೩೦ ರ ಸುಮಾರಿನಲ್ಲಿ ಕಳಲೆದೇವ ರಾಜಯ್ಯನ ನಾಯಕತ್ವದಲ್ಲಿ ನಡೆಸಿದ ಯುದ್ಧದಲ್ಲಿ "ಕೆಂಪವೀರಗೌಡ" ನಿಗೆ ಸೋಲಾಗಿ ಯಲಹಂಕವಂಶದವರ "ಮಾಗಡಿ ರಾಷ್ಟ್ರ" ವು ಕಟ್ಟಕಡೆಯುದಾಗಿ ಸೋಲಿನ ಕಡಲಿನಲ್ಲಿ ಮುಳಗಿ ಹೋಯಿತು. ಕ್ರಿ. ಶ. ೧೨೬೭ ರಿಂದಲೂ ಬೆಳಗುತ್ತಿದ್ದ "ಯಲಹಂಕವಂಶ" ವೆಂಬ ಸೂರ್ಯನು ಸಂಜೆಗತ್ತಲಿನಲ್ಲಿ ಕಣ್ಮರೆಯಾದನು. ಈ ಕಾಳಗದ ವರ್ಷ–ದಿನ–ವಾರಗಳನ್ನು ಇದು ನಡೆದ ಸ್ಥಳವನ್ನೂ ಸರಿಸರಿಯಾಗಿ ಗುರುತಿಸುವುದಕ್ಕೆ ಆಗದೆ ಆಧಾರದ ಅಭಾವದಿಂದ ಸುಮ್ಮನಿರಬೇಕಾಗಿದೆ –

ಕಳಲೆ ನಂಜರಾಜನು ತನ್ನ "ಕಕುದ್ಗಿರಿ ಮಹಾತ್ಮ" ದಲ್ಲಿ ತನ್ನಣ್ಣನಾದ ದೇವರಾಜನು "ಮಾಗಡಿ ದುರ್ಗರಾಷ್ಟ್ರ" ವನ್ನು ನುಗ್ಗು ಬಡಿದು ಆಳುತ್ತಿದ್ದನೆಂದೂ ಆಮೇಲೆ ಈ ಮಾಗಡಿ ದುರ್ಗದ ರಾಜನು ಎದುರು ಬಿದ್ದನೆಂದೂ ಹೇಳುತ್ತಾ "ವಿಗ್ರಹಕ್ಕೆಳಸಿ ಯವನಲ್ ಬರಲ್ ರಿಪು ಬಲಸಮಗ್ರಮಂ ಸಮರದೊಳು ತರಿದಾಕ್ಷಣ ಮದದ್ವಿರದವದಿ ದಿಕ್ಷುವಿನಂದದಿಂ" (೨೧-೭) ಎಂದು ಹೇಳುವುದರಿಂದ ಕೆಂಪವೀರಪ್ಪಗೌಡನಿಗೆ ಈ ಕಾಳಗದಲ್ಲಿ ಸಂಪೂರ್ಣವಾಗಿ ಸೋಲಾಯಿತೆಂದು ಗೊತ್ತಾಗುವುದು. ಈ ಕಾಳಗ ನಡೆದ ಕ್ರಿ. ಶ. ಸುಮಾರು ೧೭೨೦ ರಿಂದೀಚೆಗೆ ಮಾಗಡಿರಾಷ್ಟ್ರವೂ ಉಳಿಯಲಿಲ್ಲ. ಮಾಗಡಿ ರಾಷ್ಟ್ರವನ್ನಾಳುವ ರಾಜಮನೆತನವೂ ಬಾಳಿ ಮುಂದುವರೆಯಲಿಲ್ಲ. ಇಲ್ಲಿಗೆ ಯಲಹಂಕವಂಶವೆಂಬ ಗೌಡಧೊರೆಗಳ ಇತಿಹಾಸವು ಕಾಲದ ಎಂದೆಂದಿನ ಕತ್ತಲಿನಲ್ಲಿ ಕಣ್ಮರೆಯಾಯಿತು.

ಈ ಕೊನೆಯ ಕೆಂಪವೀರಪ್ಪಗೌಡನನ್ನು ಮೈಸೂರರಸರು ಕೈಸೆರೆ ಹಿಡಿದು ಶ್ರೀರಂಗಪಟ್ಟಣಕ್ಕೆ ಕೊಂಡುಹೋಗಿ ಅಲ್ಲಿಟ್ಟುಕೊಂಡಿದ್ದರೆಂದು ಗೊತ್ತಾಗುವುದು. ಈ ಕೆಂಪವೀರಪ್ಪಗೌಡನು ಶ್ರೀರಂಗಪಟ್ಟಣದಿಂದ ಮಾಗಡಿತಾಲ್ಲೂಕು "ಹುಲಿಕಲ್ಲು ಪಾಳೆಯಗಾರ" ಕೃಷ್ಣರಾಜಗೌಡನಿಗೆ ಬರೆದಿದ್ದೆಂಬ ಪತ್ರವೊಂದು ಪ್ರಕಟವಾಗಿದೆ. ಅದರಲ್ಲಿ ವರ್ಷ ಸಂಖ್ಯೆ ವರ್ಷದ ಹೆಸರು ಒಂದೂ ಬರೆದಿಲ್ಲವಾದುದರಿಂದ ಅದರ ವರ್ಷವನ್ನು ಗುರ್ತಿಸುವುದಕ್ಕೆ ಆಗದೆ ಹೋಗಿದೆ. ಆ ಪತ್ರದಲ್ಲಿ- (ಓಲೆಯಲ್ಲಿ) –

> ಶ್ರೀಮತು "ಕೆಂಪವೀರಗೌಡರು" ಚಿರಂಜೀವಿ ಹುಲಿಕಲ್ಲು ನಮ್ಮ "ಕ್ರಿಷ್ಣರಾಜ ಗವುಡರಿಗೆ ಮಾಡುವ ಆಶೀರ್ವಾದ ಅದಾಗಿ।। ಈ ಪಾಲ್ಗುಣ ಬ।। ೧೧ರ ವರಿಗೆ ಶ್ರೀರಂಗಪಟ್ಣದಲ್ಲಿ ಕ್ಷೇಮದಲ್ಲಿ ಇದ್ದೇವೆ. ಅಲ್ಲಿರುವಂತ ಸಕಲರು ಸಹ ನಿಮ್ಮ ಕ್ಷೇಮಕ್ಕೆ ಬರಸಿ ಕಳುಹಿಸುವದು।। ತರುವಾಯ ನಮಗೆ ಸೋಮನಾಥನ ವಿಲಾಸದಿಂದ ದುರ್ದೆಶೆ ಬಂದು ಇರುವದು ಸರಿಯಷ್ಟೆ ।। ಈಗ ನಮ್ಮ ದೇಹಸ್ಥಿತಿ ಬಹುತರ ಉಪದ್ರವಾಗಿ ಇದೆ।। ಸೋಮನಾಥನ ಪಾದಗಳಲ್ಲಿ ಐಕ್ಯವಾಗೋ ಹಾಗೆ ತೋರುತ್ತದೆ. ನಿರ್ವಾಹ ತೋರಿಲ್ಲ।। ನಮ್ಮ ವಂಶಕ್ಕೆ ಬಾಧ್ಯರು ನೀವೇ ಅಲ್ಲದೆ ಮತ್ತೆ ಬೇರೇ ಇಲ್ಲ।। ಆದ್ದರಿಂದ ನಿಮ್ಮ ಬಳಿಗೆ ನಮ್ಮ ಸೋಮನ ಕೈಯಲ್ಲಿ ನಮ್ಮ ಮುಖ್ಯ ಪಟ್ಟದ ಆಯುಧ ಶಿಖಿಸರ ಸಹಾ ಕಳುಹಿಸಿ ಇದ್ದೇವೆ।। ನೀವು ಬುದ್ಧಿವಂತರಾಗಿ।

ಕಾಲಾನುಗುಣ್ಯವಾಗಿ ಇದ್ದುಕೊಂಡು ನಮ್ಮ ದೇಹಸ್ಥಿತಿ ವಿಚಾರಿಸಿಕೊಂಡು ಆ ತರುವಾಯ ಆಗತಕ್ಕ ಕೆಲಸಗಳನ್ನು ಆಗಮಾಡಿಸುವುದು ॥ ಕಡಿಮೆ ವಿಚಾರ ವಾಲೆ ಮುಖಾಂತರ ಬರೆಯುತಕ್ಕದ್ದು ಅಲ್ಲ ॥ ಈ ಸೋಮನ ಬಾಯಿಮಾತಿನಿಂದ ಎಲ್ಲ ವಿವರವು ತಿಳಿಯುತ್ತದೆ. ॥ ಈ ವಿವರ ನಿಮ್ಮ ಮನಸ್ಸಿಗೆ ತರೋಹಾಗೆ ಮಾಡಿಸುವದು ॥ ನಿಮಗೆ ಆಪ್ತರಾದವರನ್ನು ಇಲ್ಲಿಗೆ ಕಳುಹಿಸುವದು ॥—ಕೆಂಪಯ್ಯ"

ಮಾಗಡಿ ಕೆಂಪೇಗೌಡ ೨ನೆಯ ಮುದ್ರಣ ಪು. ೪೯
(ಎಸ್. ಕೆ. ನರಸಿಂಹಯ್ಯ)

ಈ ಪತ್ರದ ಒಕ್ಕಣಿಕೆಯಂತೆ ಕೆಂಪವೀರಪ್ಪಗೌಡನು ಶ್ರೀರಂಗಪಟ್ಟಣ ದಲ್ಲಿ ರೋಗಗ್ರಸ್ತನಾಗಿದ್ದಂತೆ ಗೊತ್ತಾಗುವುದು. ಇವನು ಶ್ರೀರಂಗಪಟ್ಟಣ ದಲ್ಲಿಯೇ ದೇಹತ್ಯಾಗಮಾಡಿದನೋ ಇಲ್ಲವೇ ಹಿಂದಿರುಗಿ ಮಾಗಡಿಗೆ ಬಂದಿದ್ದನೋ ಒಂದೂ ತಿಳಿಯದೆ ಹೋಗಿದೆ–

ಇದರಿಂದ ಕೆಂಪವೀರಪ್ಪಗೌಡನು ಶ್ರೀರಂಗಪಟ್ಟಣದಲ್ಲಿ ಕೆಲಕಾಲ ಬದುಕಿದ್ದನೆಂದು ತಿಳಿದುಕೊಳ್ಳ ಬಹುದಾಗಿದೆ. ಇವನ ಕಡೆಗಾಲವನ್ನು ನಿಷ್ಕರ್ಷಿಸಿ ಹೇಳುವುದಕ್ಕೂ ಆಗದೆ ಹೋಗಿದೆ. ದಾನಿಯೂ ತ್ಯಾಗಿಯೂ, ಶೂರನೂ ಆದ ಈ ವಂಶದ ಕಡೆಯ ದೊರೆಯಾದ ಕೆಂಪವೀರಪ್ಪಗೌಡನು ಕ್ರಿ. ಶ. ೧೬೯೭ ರಿಂದ ಕ್ರಿ. ಶ. ೧೭೩೦ ರವರೆಗೆ ಮಾಗಡಿ ರಾಷ್ಟ್ರವನ್ನು ತನ್ನ "ಅಖಿಲಕ್ಷ್ಮಾ ಮಂಡಲಾಧೀಶ್ವರ-ಮಹಾಮಂಡಲೇಶ್ವರ" ಎಂಬ ಹೆಸರಿನಿಂದ ಆಳಿ ಯಶೋಕಾಯನಾಗಿ- ಬಾಳಿ ನಮ್ಮೆಲ್ಲರ ಕೃತಜ್ಞತೆಗೆ ಪಾತ್ರನಾಗಿರುವನು–

## ಗ್ರಂಥ ಸಂಪಾದನೆಯ ಮಾರ್ಗ – ಮತ್ತು ವಿಧಾನ

ಈ ಜಯಪ್ರಶಸ್ತಿಯನ್ನು ಮೈಸೂರು ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್‌ನಲ್ಲಿರುವ ಕೈ ಕಾಗದದಲ್ಲಿ ಬರೆದಿರುವ ಪ್ರತಿ ಕೆ. ಬಿ. ನಂ. ೨೮೧ ರಂತೆ ಎತ್ತಿ ಬರೆದು ಸಂಗ್ರಹಿಸಿದೆ. ಈ ಪ್ರತಿಯಲ್ಲಿ ಇದನ್ನು ನಕಲು ಮಾಡಿದ ಕಾಲ ಸ್ಥಳ ಲೇಖಕ ಮೊದಲಾದ ಯಾವ ಸಂಗತಿಗಳೂ ಬರೆದಿಲ್ಲ. ಈ ಪ್ರತಿಯಲೇಖಕನು ಈ ಹಾಡುಗಬ್ಬದ ಪದ ಪಾದ ಪಂಗ್ತಿ ಮೊದಲಾದ ಯಾವ ವಿಧಾನವನ್ನು ಅನುಸರಿಸದೆ ಸುಮ್ಮನೆ ಇರುವೆಯಸಾಲಿನಂತೆ ಬರೆದಿರುತ್ತಾನೆ. ಇದರ ಲಿಪಿಯೂ ಓದುವುದಕ್ಕೆ ಅತ್ಯಂತ ಕಠಿಣವೇ ಆಗಿದೆ. ಈ

ಯಕ್ಷಕಾನ ಪದ್ಧತಿಯ ಹಾಡುಗಳು ಇದೇ ಬಗೆಯ ಯಕ್ಷಗಾನ ಪದ್ಧತಿಯ ಹಾಡುಗಳಂತಿರದೆ "ಪೂರ್ವಕಾಲ" ದಲ್ಲಿ ಹೇಳುತ್ತಿದ್ದ ಈಗಲೂ ವಿರಳವಾಗಿ ಜನಪದದಲ್ಲಿ ಹೇಳಲ್ಪಡುತ್ತಿರುವ "**ಕಡಕು ಮಟ್ಟು**" ನ ರೂಪದಲ್ಲಿರುತ್ತವೆ ಆದರೆ "ಕಡಕಿ"ಗೂ ಇದಕ್ಕೂ ಭೇದವೂ ಇವೆ-ಇದನ್ನೆಲ್ಲಾ ಗಮನಿಸಿ, ಈ ವಿಷಯದಲ್ಲಿ ನನಗೆ ಬೇಕಾದಷ್ಟು ತಿಳುವಳಿಕೆಯಿಲ್ಲದಿದ್ದರೂ ನಾನು ಒಂದು ರೀತಿಯಿಂದ ಪಾದಚರಣಗಳನ್ನು ವಿಂಗಡಿಸಿ ಮುದ್ರಿಸಿದ್ದೇನೆ. ಈ ವಿಭಾಗ ಕ್ರಮವು ಪೂರ್ಣವಾಗಿ ಸರಿಯಾಗಿಲ್ಲವೆಂದೇ ನನ್ನ ನಂಬಕೆ. ಏನೂ ವಿಭಾಗ ಕ್ರಮವಿಲ್ಲದ ರೂಪಕ್ಕಿಂತಲೂ ನಾನು ಹಸಿಹಸಿಯಾಗಿ ತಿಳಿಯದೆ ಮಾಡಿರುವ "ಪದಕ್ರಮ" ಸ್ವಲ್ಪಮಟ್ಟಿಗೆ ಉತ್ತಮವಾಗಿದ್ದೀತೆಂದು ಊಹಿಸಿದ್ದೇನೆ. ಯಕ್ಷ ಗಾನ ಕಲೆಯಲ್ಲಿ ನಿಪುಣರಾದ ಮಹನೀಯರು ನನಗೆ ಈ ವಿಷಯದಲ್ಲಿ ದಾರಿ ತೋರಿಸಿಕೊಡಬೇಕೆಂದು ಕೇಳಿಕೊಳ್ಳುತ್ತೇನೆ. ಹೀಗೆ ಬರುವ ಸಲಹೆಯನ್ನು ತಲೆಬಗ್ಗಿಸಿ ಒಪ್ಪಿಕೊಂಡು ಅದನ್ನು ಅವರವರ ಹೆಸರಿನೊಡನೆ, ಮುಂದಿನ ಮುದ್ರಣದಲ್ಲಿ ಸೇರಿಸಿ ಪ್ರಕಟ್ಟಿಸುತ್ತೇನೆ –

ಮೈಸೂರು, ೭॥ ೮॥ ೩॥ ಪ್ರತಿಯಲ್ಲಿ ಪ್ರತಿಲೇಖಕನಿಂದ "ಹಾಡು ಗಬ್ಬ"ದ ಪದ್ಧತಿಗೆ ಊನವಾಗುಳಿದಿರಬಹುದಾದ ಭಾಗವನ್ನು [ ] ಈ ಗುರುತಿನೊಳಗೆ ತೋರಿಸಿದ್ದೇನೆ. ಈ ಪ್ರತಿಯಲ್ಲಿ ೨ನೆಯ ಭಾಗದ ಹಾಡು ೧೦ ಆದಮೇಲೆ ೧೧ಕ್ಕೆ ಹಾಡಿನ ಸಂಖ್ಯೆಯನ್ನು ೧೨ ಹಾಕಿದೆ. ಮುಂದೆ ಅನುಕ್ರಮವಾಗಿ ೧೩–೧೪ ಬರೆದಿದೆ. ಇದರಿಂದ ಈ ಹಾಡಿನಲ್ಲಿ ೪೦ ಪದಗಳಿದ್ದ ವೆಂದು ತಿಳಿದುಕೊಳ್ಳಬೇಕಾಗಿದೆ. ಈ ಪ್ರತಿಯ ಲೇಖಕನು ೧೧ನೆಯ ಪದ ವನ್ನು ಬರೆಯುವಾಗ ಕೈತಪ್ಪಿಬಿಟ್ಟಿರಬಹುದೆಂದು ಊಹಿಸಬಹುದಾಗಿದೆ. ಇನ್ನೊಂದು ಪೂರ್ಣಪ್ರತಿಯು ದೊರೆಯುವ ವರೆಗೆ ಇಲ್ಲೇನಿತ್ತೆಂದು ಹೇಳು ವುದು ಸಾಧ್ಯವಿಲ್ಲವಾಗಿದೆ.

ಮೈಸೂರು ಪ್ರತಿಯಲ್ಲಿರುವ ಅನನ್ವಯವಾದ ಪಾಠವನ್ನು ಅಡಿಟಿಪ್ಪಣಿ ಯಲ್ಲಿ ತೋರಿಸಿದೆ. ಸರಿಯೆಂದು ತೋರಿದ ಪಾಠವನ್ನು "ಮೂಲಪದ" ಗಳಲ್ಲಿ ಮುದ್ರಿಸಿದ್ದೇನೆ. ಇದೇನೇ ಆದರೂ ಮೈಸೂರು ಪ್ರತಿಯನ್ನು ಬರೆದಿಟ್ಟ ಲೇಖಕನು. ಅವನ ಹೆಸರು ಗೊತ್ತಿಲ್ಲದಿದ್ದರೂ, ಒಂದು ಅಮೂಲ್ಯವಾದ "**ಐತಿಹಾಸಿಕ ವೀರಕಾವ್ಯ**"ವನ್ನು ಕನ್ನಡಿಗರಿಗೆ ಉಳಿಸಿಕೊಟ್ಟು ಎಲ್ಲ

ಕನ್ನಡಿಗರ ಆದರಣೆಗೂ, ಪಾತ್ರನಾಗಿದ್ದಾನೆ. ಈ ಮಹದ್ವಸ್ತುವನ್ನು ಕನ್ನಡಿಗರಿಗೆ ಉಳಿಸಿಕೊಟ್ಟ ಆ ಮಹನೀಯನನ್ನು ಎಷ್ಟು ಕೊಂಡಾಡಿದರೂ, ಸಾಲದ್ದಾಗಿದೆ—

ಈ "ಜಯಪ್ರಶಸ್ತಿಯು" ಮೊದಲು ಹಾಳೆಯೊಂದು ನಮ್ಮ ಮನೆಯಲ್ಲಿ ನಮ್ಮ ಹಿರಿಯರಿಟ್ಟಿದ್ದ ಕೋರಿ ಕಾಗದದ ಕಟ್ಟಿನಲ್ಲಿ ಬಿಡಿ ಹಾಳೆಯಾಗಿ ಉಳಿದಿದೆ. ಇದರಲ್ಲಿ ಮೊದಲನೆಯ ಭಾಗದ ಹಾಡುಗಳಲ್ಲಿ ೧-೨ ಪೂರ್ಣವಾಗಿ, ೩ನೆಯ ಹಾಡಿನಲ್ಲಿ ಸ್ವಲ್ಪಭಾಗವಿದೆ, ಇದಕ್ಕೂ ಮೈಸೂರು ಪ್ರತಿಯ ಪಾಠಕ್ಕೂ ಇಲ್ಲಿಯವರೆಗೆ ಪಾಠಾಂತರವೇನೂ ಇರುವುದಿಲ್ಲ. ಈ ಕೋರಿ ಕಾಗದದ ಪ್ರತಿಯಲ್ಲಿ "ಭ-ಹ" ಮೊದಲಾದ ಅಕ್ಷರಗಳು ಹಿಂದಿನ ಕಾಲದ ರೀತಿಯಲ್ಲಿದೆ. ಈ ಹಾಳೆಯು ಸುಮಾರು ೨೦೦ ವರ್ಷಗಳಿಗಿಂತಲೂ ಹಿಂದೆ ಬರೆದದ್ದಾಗಿರಬಹುದು. ಮೈಸೂರಿನ ಪ್ರತಿ ಇನ್ನೂ ಇತ್ತೀಚೆಯದೆಂದು ಅದರ ಲಿಪಿ ವಿನ್ಯಾಸದಿಂದಲೇ ಗೊತ್ತಾಗುವುದು ನಮ್ಮ ಪ್ರತಿಯಲ್ಲಿ ಈ ಗ್ರಂಥದ ಹೆಸರು "**ಕೆಂಪೇಗೌಡನ ಜಯಪ್ರಶಸ್ತಿ**"ಯೆಂದಿದೆ. ಅದನ್ನೇ, ಈ ಪುಸ್ತಕದ ಹೆಸರಾಗಿ ನಾನು ಸ್ವೀಕರಿಸಿದ್ದೇನೆ. ಮೇಲೆ "**ಗೌಡ ಕುಲ ವಿಭೂಷಣ**" ಎಂದು ಮುದ್ರಿಸಿರುವುದನ್ನು ನಾನೇ ಸೇರಿಸಿರುತ್ತೇನೆ.

ಹೀಗೆ ಈ ಜಯಪ್ರಶಸ್ತಿಯ ಸಂಪಾದನೆಯ ಕಾರ್ಯವು ನಡೆದಿದೆ. ಇದರಲ್ಲಿ ನನ್ನ ತಪ್ಪುತಿಳುವಳಿಕೆಯಿಂದ, ಪದ-ಪದ್ಯವಿಭಾಗ ಕ್ರಮದಲ್ಲಿ ಆಗಿರುವ ದೋಷವನ್ನು ಓದುಗರು ಕ್ಷಮಿಸಬೇಕೆಂದೂ ಒಳ್ಳೆಯ ದಾರಿಯನ್ನು ತೋರಿಸಿ ಕೊಡಬೇಕೆಂದೂ, ವಿನಯಪೂರ್ವಕವಾಗಿ ಬೇಡಿಕೊಳ್ಳುತ್ತೇನೆ. ಯಾರಲ್ಲಾದರೂ "ಈ ಗ್ರಂಥದ ಪೂರ್ಣಪ್ರತಿಯಾಗಲೀ, ಪ್ರತಿಯ ಭಾಗವಾಗಲೀ" ಇದ್ದರೆ ಅದನ್ನು ನನಗೆ ದಯೆಯಿಟ್ಟು ತಿಳಿಸಬೇಕೆಂದೂ, ಮತ್ತೊಂದು ಮುದ್ರಣಕ್ಕೆ ಅದರ ಉಪಯೋಗವನ್ನು ಪಡೆದುಕೊಳ್ಳುವುದಕ್ಕೆ ಅನುಕೂಲ ಮಾಡಿಕೊಡಬೇಕೆಂದೂ, ಮತ್ತೊಮ್ಮೆ ಕೇಳಿಕೊಳ್ಳುತ್ತೇನೆ-

"ಮೈಸೂರು ಪ್ರಾಚ್ಯಸಂಶೋಧನಾಲಯ"ದ ಮುಖ್ಯಾಧಿಕಾರಿಗಳಾದ **ಶ್ರೀ ದೇವೀರಪ್ಪನವರು** ತಮ್ಮಲ್ಲಿದ್ದ, ಪ್ರತಿಯನ್ನು ನನಗೆ ವಿಶ್ವಾಸ ಪೂರ್ವಕವಾಗಿ ಕೊಟ್ಟು ಅದನ್ನು ಬರೆದುಕೊಂಡು ತರುವುದಕ್ಕೆ ಆಗಬೇಕಾದ ಸಹಾಯ ಮಾಡಿಕೊಟ್ಟುದಕ್ಕಾಗಿ, ಅವರನ್ನು ಕೃತಜ್ಞತೆಯಿಂದ ವಂದಿಸುತ್ತೇನೆ ಮತ್ತು

"ಈ ಪ್ರಾಚ್ಯಸಂಶೋಧನಾಲಯ"ದ ಇತರ ಅಡಳಿತಗಾರರನ್ನೂ, ಸಹೃದಯತೆಯಿಂದ ನೆರವುಮಾಡಿ ಕೊಟ್ಟುದಕ್ಕಾಗಿವಂದಿಸುತ್ತೇನೆ ಮತ್ತು ಈ ಕೃತಿಯನ್ನು ಮುದ್ರಿಸುವುದಕ್ಕೆ ಅನುಮತಿಯನ್ನು ಕೊಟ್ಟದ್ದಕ್ಕಾಗಿ "ಮೈಸೂರು ಪ್ರಾಚ್ಯಸಂಶೋಧನಾಲಯ"ದ ಅಧಿಕಾರಿಗಳಾದ ಶ್ರೀ ದೇವೀರಪ್ಪನವರಿಗೆ ಎಲ್ಲ ಕನ್ನಡಿಗರ ಕೃತಜ್ಞತೆಯೂ ಸಲ್ಲಬೇಕಾಗಿದೆ—

ಇದುವರೆಗೆ "**ಯಲಹಂಕನಾಡಿನ ಪ್ರಭು**" ಗಳ ವಿಷಯದಲ್ಲಿ ಪ್ರಕಟವಾಗಿರುವ ಸಾಹಿತ್ಯದಲ್ಲಿ ನನ್ನ ತಿಳುವಳಿಕೆಗೆ ಬಂದಿರುವವುಗಳನ್ನು ಈ ಕೆಳಗೆ ಪಟ್ಟಿಕೆಯಾಗಿ ತಿಳಿಸುತ್ತೇನೆ.

೧) ಕೆಂಪೇಗೌಡನ ಚರಿತ್ರೆ –
ಶ್ರೀ ಸಾಂಬಶಿವ ಮೊದಲಿಯಾರರು ಸು ।। ೧೮೮೪.

೨) ಆವತಿನಾಡ ಪ್ರಭೂಸ್ – ಶ್ರೀ ಬಿ. ಎಲ್. ರೈಸ್‌ರವರು,
ಮೈಸೂರು ಅಂಡ್ ಕೂರ್ಗ್ ಇನ್ಸ್ಕ್ರಿಪ್ಷನ್ಸ್

೩) ಮಾಗಡಿ ಕೆಂಪೇಗೌಡ – ಶ್ರೀ ಎಸ್. ಕೆ. ನರಸಿಂಹಯ್ಯನವರು
ಪ್ರಥಮ ಮುದ್ರಣ ೧೯೨೨–೧೯೨೪.

೪) ದಿ ಕೆಂಪೇಗೌಡ ಥೀಪ್ಸ್ – ಶ್ರೀ ಬಿ. ಪುಟ್ಟಯ್ಯನವರು
ಮಿಥಿಕ್ ಸೊಸೈಟಿ ಜರ್ನಲ್ ಸಂ. ೧೩-ಸಂ.-೪ ೧೯೨೩.

೫) ಯಲಹಂಕ – ಶ್ರೀ ಹಯವದನ ರಾಯರು
೬) ಆವತಿನಾಡ ಪ್ರಭೂಸ್ – ಶ್ರೀ ಹಯವದನ ರಾಯರು
ಮೈಸೂರ್ ಗೆಜೆಟಿಯರ್ ಸಂ ೫.

೭) ಮಲೆನಾಡ್ ಥೀಪ್ಸ್ – ಶ್ರೀ ಆರ್. ಶಾಮಶಾಸ್ತ್ರಿಗಳು

೮) ದಿ ಫೌಂಡರ್ ಆಫ್ ಬೆಂಗಳೂರ್ –
ಶ್ರೀ ಎಸ್. ಕೆ. ನರಸಿಂಹಯ್ಯನವರು ೧೯೨೪.

೯) ಅಲಸೂರು ಸೋಮೇಶ್ವರ ದೇವಾಲಯದ ಚರಿತ್ರೆ –
ಶ್ರೀ ಎಸ್. ಎನ್. ಲೋಕನಾಥ ಅವರು ೧೯೩೭.

೧೦) ಬೆಂಗಳೂರು ಕೆಂಪೇಗೌಡ ಶ್ರೀ ದೇ. ಜವರೇಗೌಡರು ೧೯೫೦–೫೨
೧೧) ಕೆಂಪೇಗೌಡ (ರೇಡಿಯೋ ನಾಟಕ) ಶ್ರೀ ಅ. ನ. ಕೃ ೧೯೫೩
೧೨) ಕೆಂಪೇಗೌಡ ಇತರ ನಾಟಕಗಳು ,, ೧೯೫೫
೧೩) ಮಹಾಪ್ರಭು ಕೆಂಪೇಗೌಡ (ನಾಟಕ) ಶ್ರೀ ಕರೀಂಖಾನರವರು
೧೪) ಕೆಮ್ಪೇಗೌಡಾ (ಹಿಂದಿ) ಶ್ರೀ ಕೆ. ಪ್ರಭಾಕರ ಅವರು ೧೯೫೯

೧೫) ಯಲಹಂಕ ಭೂಪಾಲ ಶ್ರೀ ಅ. ನ. ಕೃ ೧೯೬೦
೧೬) "ಬೆಂಗಳೂರು ನಿರ್ಮಾಪಕ ಕೆಂಪೇಗೌಡ ತೆಲುಗಿನವ, ತೆಲುಗು ಕವಿ" ಶ್ರೀ ವಿದ್ವಾನ್ ಕೆ. ಸುಬ್ಬರಾಮಪ್ಪ, ವೈಶ್ಯ ಪತ್ರಿಕೆ ಮೈಸೂರು ನವೆಂಬರ್ ೧೯೫೬
ಬೆಂಗಳೂರು–ಪ್ರಜಾವಾಣಿ ದಿನಪತ್ರಿಕೆ ೧೭–೩–೧೯೫೭
೧೭) "ಕೆಂಪೇಗೌಡ ಕನ್ನಡಿಗ, ತೆಲುಗಿನವ ಎನ್ನುವುದು ಇತಿಹಾಸಕ್ಕೆ ಅಪಚಾರ" ಶ್ರೀ ಕೆ. ನಾಗರಾಜ.
ಬೆಂಗಳೂರು–ಪ್ರಜಾವಾಣಿ, ೧೯-೨೦ ೨೧, ೨೨–೫–೧೯೫೭.

ಈ ಬರೆಹಗಳನ್ನು ಬರೆದಿರುವ ಯಾರೇ ಆಗಲೀ "**ಯಲಹಂಕ ವಂಶದವರ ಚರಿತ್ರೆ**" ಯನ್ನು ಅಧ್ಯಯನ ಪೂರ್ವಕವಾಗಿ ಬರೆದೇ ಇರುವುದಿಲ್ಲ. ಇವು ಅಸಂಗತವಾದ ಪ್ರಶ್ನೆಗಳಿಗೆ ಅಸಂಗತವಾದ ಉತ್ತರಗಳನ್ನು ಹೇಳಿದಂತಿರುತ್ತವೆ ಇವುಗಳಲ್ಲಿ ಕೆಲವನ್ನು ಈ ಕೆಳಗೆ ಉದಹರಿಸಿದ್ದೇನೆ–

೧) ಕೆಂಪೇಗೌಡನ ಪೂರ್ವಜ "**ರಣಭೈರೇಗೌಡ**" ಇವನು ಕಂಚಿಯ ಹತ್ತಿರದಲ್ಲಿದ್ದ ಯಣಮಂಜಿಯ ಬಳಿಯ ಆಲೂರಿನವನು ಇವನ ಮಗಳಾದ "ದೊಡ್ಡಮ್ಮ" ನಿಗೆ ಅಲ್ಲಿಯ ಪಾಳೆಯಗಾರನು ಆಶಿಪಟ್ಟನು ಕೀಳುಜಾತಿಯವನಿಗೆ ಮಗಳನ್ನು ಕೊಡಲಾರದೆ ರಣಭೈರೇಗೌಡನು ಅಲ್ಲಿಂದ ವಲಸೆ ಹೊರಟು ಬೆಂಗಳೂರು ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನಲ್ಲಿರುವ "ಆವತಿ" ಯಲ್ಲಿ ನೆಲೆನಿಂತನು. ಇವನು ಮೊದಲಿದ್ದ. "ಯಣಮಂಜಿ–ಆಲೂರು" ಪ್ರಾಂತವನ್ನು "ಮೊರಸುನಾಡೆಂ"ದು ಕರೆಯುತ್ತಿದ್ದರು. ಆದುದರಿಂದಿವರನ್ನು "ಮೊರಸು ಒಕ್ಕಲಿಗ"ರೆಂದು ಕರೆದರು. ಆವತಿಯಲ್ಲಿ ನೆಲೆನಿಂತ ಈ ರಣಭೈರೇಗೌಡನಿಗೆ ಮಲ್ಲಭೈರ, ವೀರೇಗೌಡ, ಮರಿಗೌಡ, ಗಿಡ್ಡೇಗೌಡ, ತಮ್ಮೇಗೌಡ, ಗಿಡ್ಡಪ್ಪ ಗೌಡರೆಂಬೇಳು ಜನ ತಮ್ಮಂದಿರಿದ್ದರು. ರಣಭೈರೇಗೌಡನಿಗೆ, ಜಯಗೌಡ, ಸಣ್ಣಭೈರೇಗೌಡ, ಹಾವಳಿ ಭೈರೇಗೌಡ, ಮಲ್ಲಭೈರೇಗೌಡರೆಂಬ ನಾಲ್ಕು ಜನ ಮಕ್ಕಳಾದರು—ಇವರೆಲ್ಲರೂ ಆವತಿಯಲ್ಲಿ ನಿಲ್ಲದೆ. ಯಲಹಂಕ, ಬೆಂಗಳೂರು, ದೇವಂಡಹಳ್ಳಿ, ದೊಡ್ಡಬಳ್ಳಾಪುರ, ಚಿಕ್ಕಬಳ್ಳಾಪುರ, ಹೊಳವನಹಳ್ಳಿ, ಕೊರಟಗೆರೆ, ಕುಣಿಗಲು, ಗುಬ್ಬಿ, ಹೊಸಕೋಟೆ, ಸುಗಟೂರು, ಗುಡಿಬಂಡೆಗಳ ಕಡೆಗೆ ಹೋಗಿ ನಾಡುಗಳನ್ನು ಕಟ್ಟಿಕೊಂಡು ಆಳತೊಡಗಿದರು.

ರಣಭೈರೇಗೌಡನಮಗ ಜಯಗೌಡನು ಕ್ರಿ. ಶ. ೧೪೧೮ರಲ್ಲಿ "ಯಲ ಹಂಕ"ದಲ್ಲಿ ಬಂದುನಿಂತು. ಕ್ರಿ. ಶ. ೧೪೨೦ ರಲ್ಲಿ ಈ ನಾಡ ಪ್ರಭುವಾದನು. ಇವನು ೧೫ ವರ್ಷ ಆಳಿ. ಕ್ರಿ. ಶ. ೧೪೩೩ ರಲ್ಲಿ ಗತಿಸಿದನು. ಇವನಿಗೆ "ಗಿಡ್ಡೇಗೌಡ-ಮಾಚಯ್ಯಗೌಡರೆಂಬಿಬ್ಬರು ಮಕ್ಕಳು. ಈ ಗಿಡ್ಡೆಗೌಡನ ಮಗನು. "ಕೆಂಪನಂಜೇಗೌಡ. ಈ ಗಿಡ್ಡೇಗೌಡನು ೧೦ ವರ್ಷ ಆಳಿ ಕ್ರಿ. ಶ. ೧೪೩೩ರಲ್ಲಿ ಸತ್ತನು. ಇವನ ಮಗನಾದ ಕೆಂಪನಂಜೇಗೌಡನು ೭೦ ವರ್ಷ ಆಳಿ, ೧೫೧೩ರಲ್ಲಿ ಸತ್ತನು. ಇವನ ಮಗನೇ, ಹಿರಿಯ ಕೆಂಪೇಗೌಡನು. ಕ್ರಿ. ಶ. ೧೫೧೩ ರಿಂದ ೧೫೬೯ ರವರೆಗೂ ಆಳಿದನು. ಇವನು ಕ್ರಿ. ಶ. ೧೫೩೭ ರಲ್ಲಿ ಬೆಂಗಳೂರು ಪಟ್ಟಣವನ್ನು ಕೋಟೆಯನ್ನು ಕಟ್ಟಿಸಿಕೊಂಡು ಇದನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡನು—

ಈ ಕೋಟೆಯ ಬಾಗಿಲು ನಿಲ್ಲದೆ ಬಿದ್ದುಹೋಗುತ್ತಿತ್ತು ಇದಕ್ಕೆ "**ನರಬಲಿ**" ಬೇಕೆಂದು ಯಾರೋ ಹೇಳಿದರು. ಕೆಂಪೇಗೌಡನಿದಕ್ಕೆ ಒಪ್ಪ ಲಿಲ್ಲ. ಇವನ ಸೊಸೆಯಾದ "ಲಕ್ಷ್ಮಮ್ಮ"ನು ತನ್ನ ತಲೆ ತರಿದುಕೊಂಡು ಕೋಟೆಯ ಬಾಗಿಲಿಗೆ ಆಹುತಿಯಾದಳು. ಹಿರಿಯ ಕೆಂಪೇಗೌಡನು ಬೆಂಗ ಳೂರು ಹತ್ತಿರ "**ಕೋರಮಂಗಲ**"ದಲ್ಲಿ ದೇವಾಲಯವೊಂದನ್ನು ಕಟ್ಟಿಸಿ ತನ್ನ ಸೊಸೆಯಾದ ಲಕ್ಷ್ಮಮ್ಮನ ವಿಗ್ರಹವನ್ನು ಸ್ಥಾಪಿಸಿ ಪೂಜೆಗೆ ವ್ಯವಸ್ಥೆಮಾಡಿ ದನು. ಮುಂದೆ ಬೆಂಗಳೂರು ಎಷ್ಟು ಬೆಳೆಯುವುದೆಂಬುದನ್ನು ಸೂಚಿಸಲು ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಗೋಪುರಗಳನ್ನು ಕಟ್ಟಿಸಿ ಎಲ್ಲೆಕಟ್ಟು ಗೊತ್ತು ಮಾಡಿಸಿದನು—

ಈತನ ಕಾಲದಲ್ಲಿ ವಿಜಯನಗರದಲ್ಲಿ "**ಸದಾಶಿವರಾಯ**" ನಾಳು ತ್ತಿದ್ದನು. ಈ ಹಿರಿಯ ಕೆಂಪೇಗೌಡನು ರಾಜಾನುಮತಿಯಿಲ್ಲದೆ "ಭೈರವ ನಾಣ್ಯ"ವನ್ನು ಟಂಕಸಾಲೆಯಲ್ಲಿ ಮುದ್ರಿಸಿದ್ದರಿಂದ ಇವನು ವಿಜಯನಗರದಲ್ಲಿ ೫ ವರ್ಷ ಸೆರೆಯಲ್ಲಿದ್ದನು. ಇವನು ೫೩ ವರ್ಷಗಳಾಳಿ ಕ್ರಿ. ಶ. ೧೫೬೬ ರಲ್ಲಿ ಸತ್ತನು. ಇವನ ಬಳಿಕ ಇಮ್ಮಡಿ ಕೆಂಪೇಗೌಡನು ಕ್ರಿ. ಶ. ೧೫೬೯ ರಿಂದ ೧೬೪೫ರವರೆಗೂ ಆಳಿದನು. ಇಮ್ಮಡಿ ಕೆಂಪೇಗೌಡನ ೫೫ ವರ್ಷಗಳಾಳಿಕೆ ಯಲ್ಲಿ ಬಿಜಾಪುರದ "ರಣದುಲ್ಲಾಖಾನ"ನು ಇವನನ್ನು ಗೆದ್ದು ಇವನನ್ನು ಸೆರೆ ಹಿಡಿದನು. ಅವನಿಗೆ ಶರಣುಬಂದು ಇವನು ಕಪ್ಪಕೊಡಲೊಪ್ಪಿ ಸೆರೆಯಿಂದ

ಬಿಡುಗಡೆಯಾಗಿ ಕ್ರಿ. ಶ. ೧೬೩೮ರಲ್ಲಿ "**ಮಾಗಡಿ**"ಗೆ ಬಂದು ನಿಂತು ಇದನ್ನೇ ರಾಜಧಾನಿಯಾಗಿ ಮಾಡಿಕೊಂಡನು. ಈ ಮುಂದೆ ಇವನನ್ನು "ಮಾಗಡಿ ಕೆಂಪೇಗೌಡ"ನೆಂದು ಕರೆಯತೊಡಗಿದರು—

ಇಮ್ಮಡಿ ಕೆಂಪೇಗೌಡನ ಮಗನಾದ "ಮುಮ್ಮಡಿ ಕೆಂಪೇಗೌಡ" (ಕೆಂಪವೀರಪ್ಪಗೌಡ)ನೇ ಈ ವಂಶದ ಕೊನೆಯದೊರೆ, ಇವನನ್ನು ಮೈಸೂರು ದೊರೆಗಳು ಗೆದ್ದು ಕ್ರಿ. ಶ. ೧೭೨೮ರಲ್ಲಿ ಸೆರೆಯಲ್ಲಿಟ್ಟರು. ಇಲ್ಲಿಗೆ ಮಾಗಡಿ ಗೌಡದೊರೆಗಳ ಆಳ್ವಿಕೆಯು ಕಡೆಯಾಯಿತು—

ಇಲ್ಲಿ ಬರೆದಿರುವ ಕಥೆಯಲ್ಲಿ ಕೆಲಕೆಲವರು ಸ್ಥಳ, ಕಾಲ, ಸನ್ನಿವೇಶ ಗಳಲ್ಲಿ ಅಲ್ಪ ಸ್ವಲ್ಪ ಬದಲಾವಣೆ ಮಾಡಿಕೊಂಡು ತಮ್ಮ ಗ್ರಂಥಗಳನ್ನು ರಚಿಸಿರುತ್ತಾರೆ. ಈ ಹೇಳಿಕೆಯು ಹೇಗೆ ಅಸಂಗತವಾಗಿರುವುದೆಂಬುದನ್ನು ಹಿಂದಿನ ಮುನ್ನುಡಿಯನ್ನು ಓದಿದರೆ ಯಾರಿಗಾದರೂ ಗೊತ್ತಾಗುವುದು. ಅನವಶ್ಯಕವೆಂದು ಭಾವಿಸಿ ಈ ಮಹನೀಯರೆಲ್ಲಾ ಬರೆದಿರುವ ಸಂಗತಿಗಳನ್ನು ಪರೀಕ್ಷಿಸಿ ಚರ್ಚಿಸಿರುವುದಿಲ್ಲ. ಈ ಯಾರಿಗೂ ಕೆಂಪೇಗೌಡರ ವಿಷಯದಲ್ಲಿ ತಾತ್ಸಾರಭಾವ ವಿರಲಿಲ್ಲವೆಂದೇ ನಾನೂ ಹೇಳುತ್ತೇನೆ. ಆದರೂ ಈ ಮಹ ನೀಯರಿಗೆ ಇತಿಹಾಸದ ಅರಿವಿಲ್ಲದೆ, ಹೀಗೆಲ್ಲಾ ಬರೆದಿದ್ದಾರೆಂದು ತಿಳಿದು ಕೊಳ್ಳಬೇಕಾಗಿದೆ-ಆದರೂ—

೧) ಬಿಜಾಪುರದ ಸುಲ್ತಾನರ ಆಶ್ರಯದಲ್ಲಿ ಚರಿತ್ರೆಯನ್ನು ಬರೆದ "ಪೆರಿಸ್ತ"ನು ತನ್ನ ಚರಿತ್ರೆ ಪುಸ್ತಕದಲ್ಲಿ ವಿಜಯನಗರದ ವಿರುದ್ಧಾಂಶ ಗಳನ್ನೇ ಹುಟ್ಟಿಗಟ್ಟಿಟ್ಟು ಮಾಡಿ ಬರೆದಿದ್ದಾನೆ. ಇದರಲ್ಲಿ ನಂಬ ಬಾರದ ಸಂಗತಿಗಳು ತುಂಬಿತುಳುಕುತ್ತಿವೆ-ಇದು ಇಂಗ್ಲಿಷ್ ಲೇಖಕ ರಿಗೆ ತಪ್ಪುಮಾಡಲವಕಾಶ ಮಾಡಿತು—

೨) ಮೈಸೂರು ಗೆಜೆಟಿಯರ್ ಅನ್ನು ಸಂಪಾದಿಸಿ ಬರೆದ ಶ್ರೀ ರೈಸರವರು "ಯಲಹಂಕವಂಶ"ದವರ ಚರಿತ್ರೆಯಲ್ಲಿ "ಕೆಂಪೇಗೌಡರ ಚರಿತ್ರೆ"ಯಲ್ಲಿ ತಮಗೆ ತಿಳಿದುಬಂದ ವ್ಯತ್ಯಾಸಗಳನ್ನು ತೋರಿಸಿದ್ದಾರೆ. ಒಂದು ರೀತಿಯಿಂದ ಅವರು ತಮಗೆ ಈ ವಿಷಯ ಸರಿಯಾಗಿ ಗೊತ್ತಿಲ್ಲ ವೆಂದಂತಿದೆ—

೩) ಶ್ರೀ ಎಸ್. ಕೆ. ನರಸಿಂಹಯ್ಯನವರು "ಮಾಗಡಿ ಕೆಂಪೇಗೌಡ" ಎಂದು ಗ್ರಂಥವನ್ನು ಹೆಸರಿಸಿ ಅದರಲ್ಲಿ ಕೆಂಪೇಗೌಡರ ಚರಿತ್ರೆಯನ್ನು ಸ್ವಲ್ಪ ಹೇಳಿ "ಕೊರಟಗೆರೆ, ಹೊಳವನಹಳ್ಳಿ, ಚಿಕ್ಕಬಳ್ಳಾಪುರ, ದೇವನಹಳ್ಳಿ, ಆನೇಕಲ್ಲು, ಮದ್ದಗಿರಿ, ಗುಬ್ಬಿ, ಸುಗಟೂರು, ಮುಂತಾದ ಅರಸರ ಲೋಕ ಕಥೆಗೇ ಹೆಚ್ಚು ಮೀಸಲುಮಾಡಿರುವುದಲ್ಲದೆ. ಕೆಂಪೇಗೌಡನ ಚರಿತ್ರೆಯನ್ನು, ಕಾಲಮಾನ ಸಂಬಂಧವಿಲ್ಲದೆ ಬರೆದಿರುತ್ತಾರೆ.

೪) ಉಳಿದವರ ಪುಸ್ತಕಗಳೆಲ್ಲಾ ಈ ಮೇಲಿನ ಗ್ರಂಥಗಳ ಪ್ರತಿ ಸಂಸ್ಕರಣ ಗಳಾಗಿರುತ್ತವೆ.

ಇಲ್ಲಿ ಪ್ರಸಿದ್ಧ ಕಾದಂಬರೀಕಾರರಾದ ಶ್ರೀ ಅ. ನ. ಕೃಷ್ಣರಾಯರು, ತಮ್ಮ "**ಯಲಹಂಕ ಭೂಪಾಲ**"ದ ಮುನ್ನುಡಿಯಲ್ಲಿ ಬರೆಯುತ್ತಾ-- "ಬೆಂಗಳೂರು ನಗರ ಸ್ಥಾಪನೆ, ಕೋಟೆ ಕಟ್ಟುವ ಕಾಲದಲ್ಲಿ ಕೆಂಪೇಗೌಡನ ಸೊಸೆ ಲಕ್ಷ್ಮಮ್ಮನ ಬಲಿದಾನ, ಕೆಂಪೇಗೌಡ ವಿಜಯನಗರಕ್ಕೆ ಹೋಗಿ ಸೆರೆಯಾದುದು,-ಇವಿಷ್ಟೇ ಅವನ ಬಗ್ಗೆ ನಮಗೆ ತಿಳಿದುಬಂದಿರುವ ಸಂಗತಿ ಗಳು"-**ಶಾಸನಾಧಾರ, ಗ್ರಂಥಾಧಾರಗಳು ದೊರೆಯುವವರೆಗೆ, ಮಾಗಡಿ ಕೆಂಪೇಗೌಡನ ಸಮಗ್ರ ಜೀವನವನ್ನು ಚಿತ್ರಿಸುವುದು ದುಸ್ಸಾಧ್ಯ**-

ಯಲಹಂಕ ಭೂಪಾಲ, ಮುನ್ನುಡಿ ಪುಟ ೬

ಎಂದು ಬರೆದಿರುವುದನ್ನು ನೋಡಿದರೆ ಅವರ ಸತ್ಯನಿರೀಕ್ಷಣೆಯು ಯಾರನ್ನಾದರೂ ಮೆಚ್ಚಿಸುವುದು. ಅವರು ಅದುವರೆಗೆ ಕೆಂಪೇಗೌಡನ ಕುಲದವರಾದ ಲೇಖಕರು ಒಪ್ಪಿ ಬರೆದಿದ್ದ ಸಂಗತಿಗಳನ್ನೇ ಆಧಾರಮಾಡಿ ಕೊಂಡು ತಮ್ಮ ಕಾದಂಬರಿಯನ್ನು ರಚಿಸಿದ್ದಾರೆ, ಇದನ್ನವರು ಪೂರ್ಣ ವೇನು? ಸರಿಸುಮಾರಾಗಿ ಪ್ರಮಾಣವೆಂದು ನಂಬಿಯೂ ಇಲ್ಲವೆಂಬುದನ್ನು ತಮ್ಮ ಪುಸ್ತಕದಲ್ಲೇ ತಿಳಿಸಿರುತ್ತಾರೆ—

## ಉಪಸಂಹಾರ

೧) ಯಲಹಂಕ ವಂಶದವರ ಪೂರ್ವಜನು ರಣಭೈರೇಗೌಡನೆಂಬುದು ಈ ವಂಶದವರ ಯಾವ ಶಾಸನಗಳಲ್ಲಿಯೂ ಹೇಳಿಲ್ಲ. "ಹೊಳವನಹಳ್ಳಿ"

ವಂಶದವರ ಶಾಸನಗಳನ್ನು ಬಿಟ್ಟರೆ ಯಲಹಂಕ ವಂಶದವರಲ್ಲಾಗಲೀ, ಶ್ರೀ ನಂಸಿಂಹಯ್ಯನವರು ಹೇಳುವ ಇತರ ಪಾಳೆಯಗಾರರ ವಂಶದಲ್ಲಾಗಲೀ, ಈತನು ತಮ್ಮ ವಂಶದವನೆಂದು ಹೇಳಿಯೇ ಇಲ್ಲ. ಈ ಹೆಸರೂ ಆನುಪೂರ್ವಿಯಾಗಿ ಇವರಲ್ಲಿಲ್ಲ—

೨) ಯಲಹಂಕ ವಂಶದ ಕೀರ್ತಿಗಾಗಿ ತನ್ನ "ವೀರಭದ್ರ ವಿಜಯ"ದ ನಾಲ್ಕನೆಯ ಉಲ್ಲಾಸವನ್ನೇ ಮೀಸಲು ಮಾಡಿರುವ "ಏಕಾಂಬರ ಶಾಸ್ತ್ರಿ"ಗೇ ಈ ಸಂಗತಿ ತಿಳಿಯದು. ಯಲಹಂಕ ವಂಶದವರು ಕಂಚಿ ಕಡೆಯ ಯಲಮಂಜಿ, ಆಲೂರು ಕಡೆಯವರೆಂಬುದು, ಯಲಹಂಕ ವಂಶದವರ ಶಾಸನಕಾರರಿಗೂ ಅವರ ವಂಶದ ಧವಳ ಕೀರ್ತಿಯನ್ನು ಬೆಳಗಿದ ಕವಿಗಳಿಗೂ ಲಾವಣಿಕಾರರಿಗೂ ಏನೇನೂ ತಿಳಿಯದು-

೩) ಯಲಹಂಕ ವಂಶದ ಗೌಡದೊರೆಗಳು ಆಳುತ್ತಿದ್ದ ಮೂಲ ಭೂಮಿಯೇ "ಮೊರಸುನಾಡಾ" ಗಿತ್ತು. ಇವರನ್ನು ಕಂಚಿಕಡೆಯವರೆಂದೂ ಆ ನಾಡಿಗೆ "**ಮೊರಸು ನಾಡೆಂದು**" ಹೆಸರಿತ್ತೆಂದೂ ಹೇಳುವುದು ಇತಿಹಾಸಕ್ಕೇ ತೀವ್ರವಾದ ಅಪಚಾರ -

೪) ಇವರಾರೂ ಯಲಹಂಕ ವಂಶದವರ ವಂಶವೃಕ್ಷವನ್ನೇ ಐತಿಹಾಸಿಕ ದೃಷ್ಟಿಯಿಂದ ಹೇಳಿರುವುದಿಲ್ಲ -

೫) ಒಂದನೆಯ ಎರಡನೆಯ ಮೂರನೆಯ ಯಾವ ಕೆಂಪೇಗೌಡನೂ ಮೈಸೂರವರ ಸೆರೆಯಲ್ಲಿರಲಿಲ್ಲ

೬) ಹಿರಿಕೆಂಪೇಗೌಡನು "ವಿಜಯನಗರ" ದಲ್ಲಿ ಸೆರೆಯಿದ್ದನೆಂಬ ಮಾತೂ ಐತಿಹಾಸಿಕ ಸತ್ಯವಲ್ಲ -

೭) ಹಿರಿ ಕೆಂಪೇಗೌಡನ ಸೊಸೆ "ಲಕ್ಷ್ಮಮ್ಮ" ನು ಕೋಟೆಗೆ ಆಹುತಿಯಾದುದಕ್ಕೂ ಇತಿಹಾಸದ ಸಾಕ್ಷ್ಯವಿಲ್ಲ -

೮) ಬೆಂಗಳೂರನ್ನೂ ಅದರ ಕೋಟೆಯನ್ನೂ ಹೊಯ್ಸಳರಕಾಲದಲ್ಲಿಯೇ ಸ್ಥಾಪಿಸಿದ್ದರು -

೯) ಬೆಂಗಳೂರು ಬೆಳೆಯುವುದೆಂಬುದನ್ನು ಮುಂದಾಗಿ ಗುರ್ತಿಸಿ ನಾಲ್ಕು ದಿಕ್ಕಿನಲ್ಲಿ ಗೋಪುರಗಳನ್ನು ಕಟ್ಟಿಸಿ, ಎಲ್ಲೆಯ ಗುರುತು ಮಾಡಿಸಿದವನು ಇಮ್ಮಡಿ ಕೆಂಪೆಗೌಡನೇ ಹೊರತು ಹಿರಿಯ ಕೆಂಪೇಗೌಡನಲ್ಲ -

ಈ ಸಂಗತಿಗಳನ್ನೆಲ್ಲಾ ಆದಷ್ಟು ವಿವರವಾಗಿ ನನ್ನ ಮುನ್ನುಡಿಯಲ್ಲಿ ಪ್ರಸ್ತಾಪಿಸಿರುತ್ತೇನೆ. ದಯವಿಟ್ಟು ಓದುಗರು ಅದನ್ನು ಸಾವಧಾನ ಚಿತ್ತದಿಂದ ಓದಬೇಕೆಂದು ಕೇಳಿಕೊಳ್ಳುತ್ತೇನೆ –

## ಕೃತಜ್ಞತಾ ಸಮರ್ಪಣೆ

ಕೆಂಪೇಗೌಡರ ಚರಿತ್ರೆಗೆ ಅವಶ್ಯಕವಾಗಿದ್ದ ಈ ಮುನ್ನುಡಿಯಲ್ಲಿ ಉದಹರಿಸಿರುವ ನಂ. ೧೩-೧೫ ೧೬ ನೆಯ ಶಾಸನ ಪತ್ರಗಳ ನಕಲನ್ನು ಶ್ರೀ ವೇದಟ್ಲ ಸೂರ್ಯನಾರಾಯಣ ಶಾಸ್ತ್ರಿಗಳು ಗಾಂಧಿನಗರ ಬೆಂಗಳೂರು ಇವರೂ ಮತ್ತು ನಂ. ೨೨ ೩೧ ೩೪ ನೆಯದಾನಪತ್ರಗಳ ಯಥಾನಕಲನ್ನು ಮಾಗಡಿಯಲ್ಲಿರುವ ದಿ॥ ಕೃಷ್ಣಯ್ಯಂಗಾರರ ಮಕ್ಕಳು ಶ್ರೀ॥ ಶ್ರೀನಿವಾಸಯ್ಯಂಗಾರರವರೂ ಮತ್ತು ನಂ. ೩೬ ೩೮ ೩೯ ನೆಯ ಶಾಸನಗಳ ಯಥಾನಕಲನ್ನು ಕುಣಿಗಿಲು ತಾ॥ ಬೆಟ್ಟಹಳ್ಳಿ ಮಠದ ಶ್ರೀ॥ ಗಳವರಾದ ನೀಲಕಂಠ ಶಿವಾಚಾರ್ಯ ಸ್ವಾಮಿಗಳವರೂ ನಂ. ೩೭ ನೆಯ ಶಾಸನದ ನಕಲನ್ನು ಮಾಗಡಿಯಲ್ಲಿರುವ ಶ್ರೀ ಸಿ. ಆರ್. ರಂಗೇಗೌಡರವರೂ ನಂ. ೪೧ ನೆಯ ಶಾಸನ ಪತ್ರವನ್ನು ಮಾಗಡಿಯಲ್ಲಿದ್ದ ದಿ॥ ಬಸವೇನಹಳ್ಳಿ ಮೂರ್ತಿಭಟ್ಟರೂ ಕೊಟ್ಟು ತುಂಬಾ ಉಪಕಾರ ಮಾಡಿದ್ದಾರೆ. ಇವರೆಲ್ಲರಿಗೂ ನನ್ನ ಅನಂತ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ –

ಮತ್ತು ನನಗೆ ಬೇಕಾದ ಸಾಹಿತ್ಯ-ಶಾಸನಗಳನ್ನು ಓದುವುದಕ್ಕೆ ಬೇಸರಪಡದೆ ಕೊಟ್ಟು ಸಹಾಯ ಮಾಡಿದ ಮೈಸೂರು ಪ್ರಾಚ್ಯವಿದ್ಯಾಸಂಸ್ಥೆಯ ಅಧಿಕಾರಿಗಳಿಗೂ ಮೈಸೂರು ಶಾಸನ ಇಲಾಖೆಯ ಶ್ರೀ॥ ಹನುಮಂತರಾಯರಿಗೂ ಬೆಂಗಳೂರು ಕನ್ನಡ ನಿಘಂಟಿನ ಕೋಶದ ಅಧಿಕಾರಿಗಳಾದ ಶ್ರೀ॥ ಎಲ್ ಗುಂಡಪ್ಪನವರು ಶ್ರೀ॥ ಎಃ ಬಸವಾರಾಧ್ಯರು ಶ್ರೀ॥ ಹೆಮ್ಮಿಗೆ ದೇಶಿಕಾಚಾರ್ಯರು ಇವರುಗಳಿಗೂ ನನ್ನ ವಂದನೆಯನ್ನು ಸಲ್ಲಿಸುತ್ತೇನೆ –

ಮುಖ್ಯವಾಗಿ ಈ ಜಯಪ್ರಶಸ್ತಿಯ ಕಥಾನಾಯಕನಾದ ಇಮ್ಮಡಿ ಕೆಂಪೇಗೌಡನ ವಿಗ್ರಹದ ಫೋಟೋ ಕಾಪಿಯನ್ನು ಹಲಸೂರಿಗೆ ಬಂದು ಉಚಿತವಾಗಿ ತೆಗೆದುಕೊಟ್ಟು ಉಪಹರಿಸಿದ ಬೆಂಗಳೂರು ಅರಳೇಪೇಟೆ ಕರ್ನಾಟಕ ಸ್ಟೂಡಿಯೋ ಮಾಲೀಕರಾದ ಶ್ರೀ॥ ಕುಮಾರ್ ಅವರಿಗೂ ಅವರ ಸಹೋದ್ಯೋಗಿಗಳಾದ ಶ್ರೀ ಗಂಗಾಧರ ಅವರಿಗೂ ನನ್ನ ಅನಂತ ವಂದನೆಗಳನ್ನು ಸಲ್ಲಿಸುತ್ತೇನೆ –

ಬೆಟ್ಟಹಳ್ಳಿ ಮಠದಲ್ಲಿದ್ದ ದಾನ ಶಾಸನಗಳನ್ನು ಸಂಪಾದಿಸುವ ಕಾರ್ಯದಲ್ಲಿ ಸಹಾಯ ಮಾಡಿದ ನನ್ನ ಗೆಳೆಯರಾದ ಮಾಗಡಿ ತಾ|| ಗುಡ್ಡಹಳ್ಳಿಯ ಶ್ರೀ|| ಮಾಯಣ್ಣಗೌಡರ ಉಪಕಾರವನ್ನು ನೆನಿಸಿಕೊಳ್ಳುತ್ತೇನೆ.

ಪುಣ್ಯಪುರುಷನಾದ "**ಕೆಂಪೇಗೌಡನ ಜಯಪ್ರಶಸ್ತಿ**" ಯನ್ನು ಸಂಪಾದಿಸಿ, ಮುನ್ನುಡಿಯೊಡನೆ ಪ್ರಕಟಿಸುವುದಕ್ಕೆ ಪ್ರೋತ್ಸಾಹಿಸಿದ ನನ್ನ ಮಗ **ಚಿ|| ಕ|| ಶಂಕರಪ್ಪನಿಗೂ** ಸಾಧ್ವಿಯಾದ ನನ್ನ ಸೊಸೆ **ಚಿ|| ಸೌ|| ಸುಮಂಗಲಿ ಲಲಿತಮ್ಮ**ನಿಗೂ ಬೆಂಗಳೂರಿನಲ್ಲಿ ಈ ಕೆಲಸಕ್ಕೆ ವಿವಿಧ ರೀತಿಯಿಂದ ನೆರವಾದ ನಗರ್ತರಪೇಟೆ ಎಸ್. ಎಲ್. ವಿ. ಭವನದ ಮಾಲೀಕರಾದ ಶ್ರೀ ಕೆ. ವೆಂಕಟಾಚಲಯ್ಯನವರಿಗೂ ಬೆಂಗಳೂರು ಅರಳೇಪೇಟೆ ಲೋಹದ್ರವ ಫಾರ್ಮಸಿ ಶ್ರೀ ಬಿ. ಎಸ್. ವಿ. ಪಂಡಿತರವರಿಗೂ ಎಷ್ಟೋ ಮಂದಿ ಇತರ ಮಹನೀಯರಿಗೂ ಕನ್ನಡಿಗರೆಲ್ಲರ ಕೃತಜ್ಞತೆಯು ಸಲ್ಲಬೇಕಾಗಿದೆ.

ಮುದ್ರಣ ವ್ಯವಸ್ಥೆಯ ಕಾರ್ಯದಲ್ಲಿ ಅಭಿಮಾನದಿಂದ ನೆರವು ಮಾಡಿದ ಶ್ರೀ ವೀರಕೇಸರಿ ಸೀತಾರಾಮಶಾಸ್ತ್ರಿಗಳಿಗೆ ನನ್ನ ಅನಂತವಂದನೆಗಳನ್ನು ಸಲ್ಲಿಸುತ್ತೇನೆ. ಈ ಗ್ರಂಥವನ್ನು ಸಹೃದಯತೆಯಿಂದ ಮುದ್ರಿಸಿಕೊಟ್ಟ "**ಶ್ರೀ ಸತ್ಯಾನಂದ ಪ್ರೆಸ್**" ಮಾಲೀಕರಾದ ಶ್ರೀ ವಿ. ಗೋವಿಂದಪ್ಪನವರಿಗೂ, ಈ ಮುದ್ರಣಾಲಯದ ಸಹೃದಯರಾದ ಕೆಲಸಗಾರರಿಗೂ ಮತ್ತು ಈ ಮುದ್ರಣಾಲಯದ ಫೋರ್‌ಮೆನ್ ರಾದ ಶ್ರೀ ವಿ. **ವಾಸುದೇವಯ್ಯ** ನವರಿಗೂ ನನ್ನ ಆದರದ ವಂದನೆಗಳನ್ನು ಸಲ್ಲಿಸುತ್ತೇನೆ.

**ಕರ್ಲಮಂಗಲಂ ಶ್ರೀಕಂಠಯ್ಯ**
ಸಂಪಾದಕ.

---

|| ಶ್ರೀ ||

## ಗೌಡಕುಲ ವಿಭೂಷಣ

# ಕೆಂಪೇಗೌಡನ ಜಯಪ್ರಶಸ್ತಿ

ಸರ್ವಸಿದ್ಧಿ ಪ್ರದಾಯಕ, ವಿನಾಯಕಾಯ ನಮಃ
ಶ್ರೀ ಶಾರದಾಂಬಾಯ ನಮಃ - ಶ್ರೀ ಗುರುವೇ ನಮಃ

– ರಾಗ – ಕನ್ನಡ ಕಾಂಬೋದೀ –

ದಕ್ಕಿತೋ ನಿನಗೆ ಪಂಥಾ। ದಕ್ಕಿತೋ ನಿನಗೆ ಪಂಥಾ || ಪಲ್ಲವಿ ||
ಧೀರುರೆ ರೂಪ–ಜಯಂತ ದಿಕ್ಕಂಪ। ರವಿಜಸ ಗಂಪ–ಇಮ್ಮಡಿ ಕೆಂಪ।
ದಕ್ಕಿತೋ ನಿನಗೆ ಪಂಥಾ— || ಅನುಪಲ್ಲವಿ ||

ಮಂಡಲಪತಿ ವೆಂಕಟರಾಯರ–ಭುಜ–ದಂಡ ಸ್ವಾಮಿದ್ರೋಹರ ಗಂಡ। ನೆನಿಪಕಾಲ್ – ಪೆಂಡೆಯುವನು ಯಿಟ್ಟ ಚಿಕ್ಕರಾಯ ನೆನಿಸಿಯೆ। ಕೊಂಡ ಯಿಮ್ಮಡಿ ತಮ್ಮಭೂಪನ ಸುಖದೊಳಿರ್ದು || ಖಂಡೇಂದುಧರ ನೆಡೆಗೈ ತರಲಾ ತನ–ರಾಜ್ಯ–ಭಂಡಾರ ಬೊಕ್ಕಸವಧಿಕಾನೆ ಕುದುರೆಯ। ತಂಡ ಮುಂತಾಗಿ ಯಲ್ಲವನು–ಅಯಿಯುವ ಗೌಡ–ಲಂಡತನದಿ ಗ್ರಹಿಸಿ–ದುರ್ಗಗಳ ಪ್ರ–ಚಂಡತೆ ಯಿಂ ಬರಿಸಿ–ತಾ ನಲ್ಲದೆ–ಗಂಡಗಲಿಯಲ್ಲೆನಿಸೀ–ಯಿರಲು ಆದಕಂಡು ಕಡುಹು ವೆರಸೀ–ಆ ಕ್ಷಣದಿ ಮುಂ–ಕೊಂಡೆ, ನೀ ರಾಜಕಾರ್ಯಕೆ ಮನವೆಳಸೀ ||
ದಕ್ಕಿತೋ ನಿನಗೆ ಪಂಥಾ— || ೧ ||

---

* ಮೈಸೂರು ಪ್ರತಿ ಕ್ಯಾಟಲಾಗಿನಲ್ಲಿ "ಕೆಂಪರಾಯರ ಜಯಸ್ತುತಿ" ಯೆಂದೂ, ಪುಸ್ತಕದ ಮೊದಲಿನಲ್ಲಿ "ಬೆಂಗಳೂರು ಕೆಂಪರಾಯರ ಯುದ್ಧದೇಶಗಳ ಜಯಪ್ರದದ ಪದಗಳು" ಎಂದೂ ಬರೆದಿದೆ. ಮೈ. ಓ. ರಿ. ಇನ್‌ಸ್ಟಿಟ್ಯೂಟ್ ಕೆ. ಬಿ. ನಂ. ೨೮೧.

ಆಳೋಚಿಸದೆ ಅಯಿಯಮು ಗೌಡಗೆ-ಬುದ್ಧಿ-ಹೇಳಿ ಕಳುಹಲು ಹೇಜ
ಬರಿಂದ-ಹಿತವಾಗಿ-ಕೇಳದಿರಲು ವಳ್ಳಿತಾಯಿ ತೆನುತಾ-ಖತಿ-ದಾಳಿ ಮನದ
ಬಲುವಾಸಿ - ಪಂಥದೊಡಾನೆ - ಥಾಳಿವರಿದುಮಿಗೆ ದಕ್ಕಾಡಿ ತನದಿಂದಾ ||
ಕೋಳಾಲದ ಸುತ್ತಬಳಸಿ-ಸೀಮೆಯನೆಲ್ಲಾ-ಧೂಳಿಪಟದ ಮಾಡಿ-ತುರು ಸೆ
ವಿಡಿದು-ಹೇರಾಳದ ಹಿತರನ್ನೆಲ್ಲ ಹೊಕ್ಕಿರಿದೂ || ಕಟ್ಟಾಳುಗಳೆದೆಗೆ ಝಲ್ಲಾ-
ಬರಿದು ಘನ-ದೇಳಿಗೆ ಯೆನಿಸಿ, ಗೆಲ್ಲಾ-ವಾಂತುನ್ಯ-ಪಾಲಕರುಗಳನೆಲ್ಲಾ-ಚಲ
ಪದಕೆ. ಮೂ-ಲೋಕದೊಳು ನಿನಗಿನ್ನೆಣೆಯಿಲ್ಲಾ || ದಕ್ಕಿತೋ ನಿನಗೆ
ಪಂಥಾ— || ೨ ||

ನೀಟನ ಬಲಗೊಂಡನ ಹಳ್ಳಿಯ-ಬಲು-ಗೋಟೆಯ ಕೊಳ್ಗೊಂಡು
ಪರಭೂಮಿ-ಪಾಲರ-ಕೂಟವ, ಹಾರದೆ, ಆಪ್ತಬಲದಿ-ಹೊಸ-ಕೋಟೆಯ
ಮುತ್ತಿ, ಮೂದಲಿಸಿ ಮುಂಬರಿದಾಗ || ಲೂಟಗಯ್ಯದೆ, ಲಗ್ಗೆವಿಡಿಯದೆ-
ಪಂಥದಿ-ಬೇಟೆರಾಯನಗುಡಿ ವೊದಲಾದ-ನಾಲ್ಕು-ಕೋಟೆಯ, ಬಲ್ಮೆಗೊಳಿಸಿ,
ಫಿರಂಗಿಗಳಿಂದಾ || ಸೂಟೆ ವಿಡಿ ವೀಡಿಸಿದೆ-ತುಂಬಿದ ಬಲು-ಪೇಟೆಯ ನೋಡಿ
ಸಿದೆ-ವೈರಿಗಳಿಗೆ-ಕೋಟಲೆ ಗಾಣಿಸಿದೆ-ವಂದಾಮುಲೆ-ಯಾಟವ ನಾಡಿಸಿದೆ-
ಭಾಪುರೆ ಕ-ರ್ನಾಟಕದೊಳ್ ಸತ್ಕೀರ್ತಿಯ ಕೊಂಡಾಡಿಸಿದೆ || ದಕ್ಕಿತೋ
ನಿನಗೆ ಪಂಥಾ— || ೩ ||

ಸುತ್ತಗೆರೆಯವು, ಸುರಂಗಮೇರುವೆ-ತಳಿ-ಯುತ್ತರಗಳಿದಿರಿಕ್ಕಿ ದಶ[1]-ದೆಸೆ
ಗಳು-ಮೊತ್ತ ರೊಕ್ಕುಡ ಪರಿ ಮೊಳಗುವ-ಬಹುವಾದ್ಯ ಯೆಸವಾ || ಸೊಕ್ಕಾನೆ
ಗಳುತ್ತಮು ಕುಮುರೆ-ಮಂದಿಗಳ-ಮುಸ್ತೈದೆಗಳೆತೆತ್ತ-ನೋಡಿದರು-ಯಚ್ಚರ
ಘನವೇನೆಂಬೆ-ಮತ್ತಾರಿಗಳವಲ್ಲ-ಮದನಾರಿ ತಾಬಲ್ಲಾ || ಮುತ್ತಿಗೆ ಬಲು
ಆಗಿದೆ-ಕೊಂಡಾಡಲು ಹೊತ್ತಿಲ್ಲ ಸಾಲದಿದೆ-ಮೇಲ್ಕಂಡು ಕೂ-ಡೆತ್ತಿ ಬಂದರೆ
ಸೋಲ[ದಿ]ದೆ-ಪೊಗರು ಭೂ-ಪೋತ್ತಮರೆನುತಿರದೆ-ಸಕಲ ಜನ-ವತ್ಯಂತ
ಚೋದ್ಯಬಡುತ ಲಾಡುತಿದೆ || ದಕ್ಕಿತೋ ನಿನಗೆ ಪಂಥಾ— || ೪ ||

ಆಡಲೇನಯ್ಯನು ಮನದಲ್ಲಿ-[ಆಗಲೆ]-ಕೂಡಿಕೊಂಡಾಲೋಚನೆಯ-
ಮಂತ್ರಿಜನರೊಳ-ಗಾಡಿದ, ಮದಸೊಕ್ಕಿದಾನೆಯು-ಕೈಕಬ್ಬ-ನಾಡೊಳು ಸೆಳೆವ
ಸಮರ್ಥರುಂಟೇ ಯಂದು || ಗಾಡದಿ ಪೆನುಗೊಂಡೆಗೈದಿ[2]-ವೆಂಕಪೇಂದ್ರಗೆ-

---

[1] ಯುತ್ತಗಳಿಡಿಕ್ಕಿದಿರಿಷ [2] ಗೈದೆಂಕಪೇಂದ್ರಗೆ

ಬೇಡಿದೊಡವೆಯೀಯ್ಯೆ ಮೆಚ್ಚಿ-ಯವನು, ನಿನ್ನ-ಪಾಡೆನ್ನದಂಜ ಬೇಡೆನುತ-ಅಭಯವ-ನೀಡಿ, ಬಳಿಕಾಗಲಾ ಮನ್ನೆಯರನೂ ॥ ಕೂಡಿ ಮನೋನು ರಾಗ-ದಿಂದುಬ್ಬಿ-ನೋಡಿ, ತನ್ನವರ ಜಾಗಾ-ಮಾಡದಿರಿಯೆಂ-ದಾಡುತಾ ಹವಕೆ ಬೇಗಾ-ಮುಸ್ತೈದೆಯು-ಜೋಡಣೆಯಿಂದನುವಾಗಿರಲಾಗಾ ॥ ದಕ್ಕಿತೋ ನಿನಗೆ ಪಂಥಾ— ॥ ೫ ॥

ಪಡೆ, ಭೋರಿಡುತ ಪಯಣಗತಿಯೊಳಗೆ-ಅಂದು-ಪೊಡೆವ, ನಾನಾ, ವಾದ್ಯಗಡಣದಿ-ನಿಲದೊ-ಗ್ಗೊಡೆಯುದೆ, ಬಲ್ಲಾಳಪುರದ ಕೆರೆಯ-ಮೂಡ-ಗಡಿಯಲಿ ಪಾಳ್ಯವಿಳಿದು-ಸುತ್ತಣ ಬಲು-ಪೊಡವಿ ಪಾಲಕರ ಕೂಟಗಳನೆಲ್ಲವ, ಕೂಡಿ ॥ ಕಡಲು ತಾ, ಮೇರೆದಪ್ಪಿದ ವೊಲು-ವೆಂಕಟ ನೃಪ-ನಡದು ಮುತ್ತಿಗೆದೆಗಸಲು-ಹೊಸ ಕೋಟೆಯ-ಬಡಗ ದಿಕ್ಕಿನಲಿ ದಂಡೂ-ಕದನಕೆಂ-ದೊಡನೆ ಮುಂಬರಿಯೆ ಕಂಡೂ-ಹೊಡೆಯುಗಳ-ನಡೆಯಲೊಡನೆ ಮಾರ್ಕೊಂಡೂ-ಆ ಕ್ಷಣದಿನೀ-ತಡೆಯುದೆ, ಕಾದಿಸಿದೆಯೋ ನೆರೆಗಂಡೂ ॥ ದಕ್ಕಿತೋ ನಿನಗೆ ಪಂಥಾ— ॥ ೬ ॥

ವುಬ್ಬಿಯಾ ಸಮಯದಿ ವೇಂಕಟ-ನೃಪತನ್ನ-ವೊಬ್ಬುಳಿಯಾನೆ, ಕುದುರೆ ಮಂದಿ-ಸಹವಾಗಿ-ಬೊಬ್ಬಿಡುತಲಿ, ಬರೆ, ಕಾಣುತ-ತೇಜಿಯು-ನಿಬ್ಬರದಲಿ ತರಿ ಸೇರಿಸೆ-ಝುಯವಿಡಿ-ದಬ್ಬರಿಸುತ ಕವಿಸಲು ಬಾಣ-ಕೋವಿಯ-ಕಬ್ಬೊಗೆಯ ವಿಲಬ್ಬೆವರೆ-ವೊಳಗಲು ಕೂಡೆ ॥ ಸಬ್ಬದಳವ ಹೊಗಿಸಿರಿದರಿಗಳ ರಣ-ಗಬ್ಬಿಗರ ವಿಚಾಡಿಸಿದೆ-ಭೀತಿಯು, ಪಗೆ – ಗರ್ಭದಿ ಮೂಡಿಸಿದೆ-ಕಾಳಗದೊಳ-ಗೊಬ್ಬರಿಲ್ಲ ದೋಡಿಸಿದೆ-ಭೂತಗಣಕೆ-ಹಬ್ಬ ಹರುಷದಿಂದೊಲಿದು ಮಾಡಿಸಿದೇ॥ ದಕ್ಕಿತೋ ನಿಗಗೆ ಪಂಥಾ— ॥ ೭ ॥

ಆನೆಯ ಬಲವೊಗ ಮುರಿದು-ಓಡಲು ತನ್ನ-ಸೇನೆಯ ಕೈವೀಸಿ ಕರೆದು-ಮರಳಿ ಹೊಕ್ಕು-ಆ ನರನಾಥನೂಳಿಗ ದೆಂಕಟೇಂದ್ರ-[ನಾಗ] ನಿ-ಧಾನಿಸಿ ಧೈಯ್ಯವು ಗೌಡ-ಮುಂತಾದ ಮ-ಹಾನುಭಾವರು ಮಡಿದುದ ಕಿನ್ನು ಗಡಿಯಿಲ್ಲಾ ॥ ತಾನು, ತನಗೆ, ಕಂಗೆಟ್ಟೊ-ಮರನ ನೇರಿ-ವಾನರನೊಲು ಬಾಯಿಬಿಟ್ಟೊ,-ಇಹರ ಕಂಡು-ಸಾನುರಾಗದಿ ನೋಡುತಿರೆ ಚೋದ್ಯಬಟ್ಟೊ॥ ದಕ್ಕಿತೋ ನಿನಗೆ ಪಂಥಾ— ॥ ೮ ॥

ಪರಿಧಾವಿ, ಸಂವತ್ಸರದ–ಕಾರ್ತಿಕದೊಳ್–ಮೆರೆವ ಶುದ್ಧೇಕಾದಶಿ–ಭಾನುವಾರದೊಳ್–ತರಣಿ ಪಶ್ಚಿಮದ ಪಾರಾವಾರಾದೊಳು–ಇಳಿ–ದಿರುತಿಹ ಸಮಯದಿ–ವೆಂಕಟಭೂಪನ-ದೂರದೊಳೊಪ್ಪಿಸಿ ಕೊಟ್ಟು-ವಾಹನಂಗಳ ಬಿಟ್ಟು-ಹರಣವುಳ್ಳರೆ ಹಾಡಿಕೊಂಡುಣ್ಣ ಬಹುದೆಂದು ॥ ಗುರಿತನ ದೊರೆಯಣ್ಣಗಳು-ಓಡುತಲೀ-ಶ್ವರನಸುರೇಂದ್ರನನೂ-ಮಾರುತ್ತರದಿ-ನೆರೆ ನೀಲರನ್ನವನೂ·ಕುಂಭಜ ಹಿಮು-ಕರ ಮುಂತಾದರನೂ-ಬೈದರು ಯೇನು-ಪರಿಯೋ ವಿಚಿತ್ರವನೂ-ಕಂಡಂಜು - ತಿರುವರಿಗಭಯವನಿತ್ತೆ ಮತ್ತೇನು ॥ ದಕ್ಕಿತೋ ನಿನಗೆ ಪಂಥಾ— ॥ ೯ ॥

ನುಡಿಯಲಿನ್ನೇನಾ ಕ್ಷಣ-ಧರ್ಮಗಾಳೆಯು-ಹಿಡಿಸಿ, ಸಿಕ್ಕಿದ–ಬಿರಿದಿನ ಢಾಳು, ಢಮಾಮಿ-ತಡೆಯದಂದಳ, ಛತ್ರ, ಚಮರ-ಪಲ್ಲಕ್ಕಿ-ಕಡು ಚಲುವಾನೆ ಕುದುರೆ ಸೆರೆಯಾಳ॥ ಗಡಣ ಮುಂತಾಗಿ ನಡೆದು-ಹೊಸ ಕೋಟೆಯು-ಬಿಡದೆ ಸಾಧಿಸಿ ಠಾಣ್ಯವನು-ಬರಿಸಿ ಕೂಡೆ-ಸಡಗರದಿಂಕೊಳು [ಗುಳ] ಸಹಿತ ನಾನಾ ವಾದ್ಯ ॥ ಪೊಡೆಯೆ ಬೇರೊಂದು ಮುಂದೆ-ಭರದಲು-ಗ್ಗಡಿಪ ಪಾಠಕರ ಮುಂದೆ-ಯೆಸೆಯೆ ಬಲು-ಪೊಡವಿ ಪೆರ್ಬೆನ್ನ ಹಿಂದೆ-ವೋಲೈಸಲೊ-ಗ್ಗೊಡೆಯ ದರ್ಥಿಯನು ತಂದೆ-ಭಾಪುರೆ ಜಯ-ದೊಡನೆ ನಲಿದು, ಬೆಂಗಳೂರಿಗೆ ಬಂದೇ ॥ ದಕ್ಕಿತೋ ನಿನಗೆ ಪಂಥಾ--- ॥ ೧೦ ॥

ಯಿತ್ತ ಸುಖದೊಳಿರಲತ್ತಲೀ-ವಾರ್ತೆಯು-ಬಿತ್ತರಿಸಲು ಕೇಳಿ ರಾಯರು-ಬಲುಚಿಂತಿ-ಸುತ್ತಾಗ ಕರೆದು ಕುಮಾರ-ರಾಯರ ಶೌರ್ಯ-ವೆತ್ತುರು ವೋಗಿ ಬೇಗದಿ-ರಾಜ್ಯಕಾರ್ಯವ-ನೊತ್ತಿ ಮಾಡೆಂದು ನೇಮಿಸಿ-ಬಹುದ್ರವ್ಯವ-ನಿತ್ತು ಮನ್ನೆಯರೊಡಗೂಡಿಸಿ, -ಕಳುಹಲು-ವುತ್ತಮ ಲಗ್ನದಿ ಪೊರಮಟ್ಟೊ ॥ ಬಿಡದೆ ದಂ–ಡೆತ್ತಿ ವೈರಿಗಳ ಹೇಡಿ-ಗೊಳಿಸುವೆನೆಂ-ದುತ್ತರ ಪಂಥವಾಡಿ - ಕೂಚು ಮಾಡಿಸಿ-ವೊತ್ತಿ ಕೋಪಾಗ್ನಿ ಮೂಡಿ-ಮುಂಬರಿದೊಡ-ನತ್ಯಂತಬಲವ ಕೂಡಿ-ನಿಲ್ಲದೆ, ದಳ-ವೆತ್ತಿನಡೆದು ಬರೆ ಘನರಾಜ ಮೋಡೀ ॥ ದಕ್ಕಿತೋ ನಿನಗೆ ಪಂಥಾ— ॥ ೧೧ ॥

ಧೀರನನಂತ ರಾಜನು–ಮಾಕರಾಜನು–ದಾರಯಾಚಮನಾಯಕ-ಜಗ್ಗರಾಜ, ಗಂ–ಭೀರನಾ ಜಗದೇವರಾಯ–ತಿಮ್ಮೋಂದ್ರನು-ಸೀರೆಯ[1]ದ ರಂಗಪ್ಪ-ಯಿಮ್ಮಡಿ ಬೈರ, ಹಂ-ಮೀರ ಪಟ್ಟದ ದಳವಾಯಿ–ಚುಂಚಣ್ಣನೆಂ–ಬಾರಣಗಲಿ

[1] ಸೀರ್ಯದ

ಗಳು, ಮುಂತಾಗಿ-ಯೇನೆಂಬೆ-ಭೂರಿ, ಬಲವ, ಕೂಡಿ ನಿಬ್ಬರದಲಿ ॥ ಬೆಂಗ ಳೂರು ಪಟ್ಟ[ಣ]ಕೆ ಬಂದೂ-ಮುತ್ತಿಗೆಗೆಂದೂ-ದೂರದೆ ಪಾಳ್ಯನಿಂದೂ ಹೊಡೆ ಯಗಳು-ಮೀರಿ ಹಾಕಲು, ನೀನಂದೂ-ಕೋಟೆಗೆ, ಪ್ರತಿ-ದೋರಿ ಕೋಟೆಗಳ ಮುಂದೂ-ವರಿದು ಹಾಕಿ-ಭೂರಿ ನೃಪರೊಳು ಕರಿಸೆ ನಿನಗಿಂದೂ ॥ ದಕ್ಕಿತೋ ನಿನಗೆ ಪಂಥಾ— ॥ ೧೨ ॥

ಉಳಿ, ಕಂಠಮಾಲೆ ಪದಕ-ಮುತ್ತಿನ ಚೌ-ಕುಳಿ ಭುಜಕೀರ್ತಿ-ಯುಲಿವ ಘಂಟೆ ಸರಪಣಿ-ಗಳ ನಿತ್ತು-ಕುಲ, ಛಲ-ಬಲು ಬಿರುದುಗಳುಳ್ಳಗ್ಗದ, ಧೀರ-ವೀರ, ವಿಕ್ರಮರು-ಗಳೆನಿಸುವ-ಹಳೆಯ ಪೈಕದ ಮಂದಿ ಕುದುರೆ-ಸಹಿತ ಪೂರ-ಘಳಿಲನಾಕ್ಷಣ ಪೊರಮಟ್ಟೊ ॥ ಯಿರದೆ ಪಾಯಿ-ದಳಕೆ ಪೈದೋರಿಸಿದೆ. ಮಾರಾಂತರಿ-ಗಳನು ಪಚಾರಿಸಿದೆ-ಅವರ ಹಮ್ಮು-ಗಳನೆಲ್ಲ[ವ] ಹಾರಿಸಿದೆ-ಹೊಕ್ಕು ಹೊಯಿದ-ನಳಿದು ನೀತಾಡಿಸಿದೆ[1]-ಕಡಿದು ಸಾ-ಲ್ಮಲೆಯ ಪಾಳೆಯಕೆ ಬಂಡಿಯಲಿ ಹೂಡಿಸಿದೆ ॥ ದಕ್ಕಿತೋ ನಿನಗೆ ಪಂಥಾ— ॥ ೧೩ ॥

ಖಂಡಿಸಿ, ಕೆಡದಾನೆ ಕುದುರೆ–ಕಾಲಾಳ್ಗಳ-ರುಂಡ, ಮುಂಡಗಳಿಂದ ಕುಣಿವ-ರಕುತ ಕರುಳ್-ಖಂಡ ಕಾಳಿಜದೊಟ್ಟಲಿಂದ–ಲೆಸೆವರಣ-ಮಂಡಲ ದೊಳು ಶಾಕಿನಿ, ಡಾಕಿಣಿ ಮರುಳ-ತಂಡದಣಿಯೆ ತುಂಡು ಕುಣಿದಾಡಿ-ಪರ ಸುತ-ಚಂಡವಿಕ್ರಮ ಯಿಮ್ಮಡಿಕೆಂಪ–ಬಾಳೆಂದು–ಕೊಂಡಾಡುತಲಿರೆ ಧುರವ ಜಯಿಸಿದೆ ॥ ಮುಂ–ಕೊಂಡುಯೇಕಾಂಗವೀರಾ–ಭಾಪುರೆ, ನಿನ್ನ–ಕಂಡು ಮರೆಹೊಕ್ಕವರಾ–ರಕ್ಷಿಸಿದೆವು–ದ್ದಂಡವಾರುಧಿ ಗಂಭೀರಾ–ಸುತೇಜ ಮಾ-ರ್ತಾಂಡ ನಿಶ್ಯಂಕಶೂರಾ–ಸಕ್ಕೀರ್ತಿ, ಕ–ರಂಡಸಾಹಸಮಲ್ಲ ಸಂಗ್ರಾಮಧೀರಾ॥ ದಕ್ಕಿಕೋ ನಿನಗೆ ಪಂಥಾ— ॥ ೧೪ ॥

ಮನವೊಲು ಮಾಕರಾಜನು, ಮಝುಭಾಪೆಂದಾ–ಜನಪತಿ ಜಗ್ಗ ರಾಜನು ಧಣಿರೇಯೆಂದಾ–ಮೊನೆಗಾರನೆಂದು ಕುಮಾರರಾಯನುಯೆಂದಾ-ಜಿನುಗದೆ ಜಗದೇವರಾಯ ಶಾಭಾಸೆಂದಾ-ಅನಂತರಾಜನು ಮೆಚ್ಚಿ ಅಧಿಕ ಬಲ್ಲಿದ ನೆಂದಾ–ಘನಸುಪ್ರತಾಪನೆನುತ ತಿಮ್ಮನೃಪನೆಂದಾ-ತನುವುಬ್ಬಿ, ದಳವಾಯಿ ಚುಂಚಣ್ಣ ಭಳಿರೆಂದಾ–ಗುಣಕೆ ಮತ್ಸರವೇಯೆಂದ ಬೈರೇಂದ್ರಾ ॥ [ತಾ]ನೆಂ–

---

[1] ತಣಿಸಿದೆ

ದನು ಪುಣ್ಯವಂತನೆಂದೂ–ಕೊಂಡಾಡುತ–ಅನಿತು ಮನ್ನೆಯರುವಂದೂ–ಯೇಕಾಂತದ-ಮನೆಗೆ ಬೇಗದಲಿ ಬಂದೂ – ಭೀತಿಯೊಳಾಳೋ – ಚನೆಯ ಮಾಡುತ ಲವರಿರುತಿರಲಿಂದೂ ॥ ದಕ್ಕಿತೋ ನಿನಗೆ ಪಂಥಾ— ॥ ೧೫ ॥

ಮುಂದರಿಯದೆ, ಬೈರಣ್ಣನ–ಬೆಳೆಗೆ–ಬಂದೆವೇತಕೆ ಬೆಂಗಳೂರ್‍ಯಾರು–ನಾವ್ಯಾರು–ತಂದುದೇ ವಿಧಿಯಿಲ್ಲಿಗೆ ನಮ್ಮ–ನಂಬಿಸಿ-ಬಂಧು ಬಳಗ ವಾನೆ ಕುದುರೆ-ಮಂದಿಗಳನು–ಕೊಂದುಕೊಂಡೆವು ಅಕಟಕಟಾ-ನಾವೀಗಲಿ-ಬಂದ ತಪ್ಪಿಗೆ ಕಡೆಹಾಯಿಸೋ-ನಮ್ಮನು–ಇಂದು ಯಿಮ್ಮಡಿ ಕೆಂಪರಾಯ ನಿನಗೆ ಪುಣ್ಯವೆಂದೂ ॥ ಹೇಜಿಬರನು ಕಳುಹಿ [ಸಿ] ದೈನ್ಯದಿಂದ-ಸಂಧಾನ–ವನು ನಡೆಸಿ ಮುದದಿಂದ-ಈಗ ಪಯಣ-ವನು ದೊರೆ ದೊರೆಗಳು ಅಂದ–ಆಗ ಪಾಳ್ಯ –ವನು ಬೆಳಕು ದೋರಿ ಬಂದ,–ದಾರಿಯ ಹಿಡಿದರು ಮತ್ತಿನ್ನೇನೂ ॥ ದಕ್ಕಿತೋ ನಿನಗೆ ಪಂಥಾ— ॥ ೧೬ ॥

ತಡಹಿ ತಲೆಗಳನು ಬದುಕಿದೆವೆಂದು-ನಿಡುಮುಸುಕಿನಲೆ ದೊರೆಗಳೆಲ್ಲ [ಬಂದು]-ರಾಯರಿ–ದ್ದೆಡೆಗೈಯಲು ಕೋಪಿಸಿ ವೋರ್ವಗೆ [ನಿಂದು]-ಸೋತ–ಬಡಿಹೋರಿಗಳಿರಹೋಗೆಂದು-ಬಳಿಕಲಿ–ಮ್ಮಡಿ ಕೆಂಪನೃಪನ ಸಾಹಸವ ಕೊಂಡಾಡಲು ॥ ಕಡುಹರುಷದಿ, ನರಪತಿ ಮೆಚ್ಚಿದನೆಂದು–ಸಡಗರದಿಂದ ಶ್ವಪತಿ, ಗಜಪತಿಗಳಂದುಡುಗರೆ ತೇಜಿಗಳಾ ॥ ಕಾಗಜದಲೊ–ಗ್ಗೊಡೆಯರ, ವಿನಯಗಳಾ-ಬರೆಸಿ, ಸೊಂಪು-ವಿಡಿದ ಸುವಸ್ತುಗಳಾ-ಕಳುಹೆಕಾಣಿ-ತ್ತೊಡನೆ ಕೈಕೊಂಡ ಬಾಳಾ–ಸಂತೋಷದಿ–ಪಡೆದೆ, ನೀ ಪೊಡವಿಯೊಳಧಿಕ ವಾರ್ತೆಗಳಾ ॥ ದಕ್ಕಿತೋ ನಿನಗೆ ಪಂಥಾ— ॥ ೧೭ ॥

ವರ, ಚೆಂಜಿ, ಮಧುರೆ, ತಂಜಾವೂರು–ವೇಲೂರು-ನೆರೆ, ಚಂದ್ರಗಿರಿ ಚನ್ನಪಟ್ಟಣ–ಶ್ರೀರಂಗ–ಪುರ, ನಂಜರಾಯಪಟ್ಟಣ, ಚೆಲ್ವ, ಬೇಲೂರು ॥ ಪಿರಿಯಪಟ್ಟಣ, ಸೋದೆ, ಸೊನ್ನಲಾಪುರಿ–ಸಲೆ-ಸಿರಿಯುಳ್ಳ, ಜಡೆಯಯಿಕ್ಕೆ, ಮೇಳಿಗೆ. ಬಂಕಾಪುರ–ಹಾನುಗ-ಲ್ಲುರೆ, ರಾಯಚೂರು, ವಿಜಯಪುರ, ಡಿಳ್ಳಿ, ಕಾಶಿ, ರಾಮೇಶ್ವರ ॥ ಚತುರಬ್ಧಿ-ಪರಿವಳಯದೊಳಗೆಲ್ಲಾ-ನಿನ್ನಯ ಕೀರ್ತಿ-ಪರಿದು ರಣಾಗ್ರಮಲ್ಲಾ–ಶೋಭಿಸುತೀಗ-ಪರಿಪೂರ್ಣವಾಗಿದೆಲ್ಲಾ–ಯೆಂತೆಂದು, ವಿ-ಸ್ತರಿಸುವೆ ಶಿವನೆ ಬಲ್ಲಾ-ನಿನಗಿನ್ನು–ಸರಿಯಾಹ ದೊರೆಗಳೀ ಧರೆಯೊಳಗಿಲ್ಲಾ ॥ ದಕ್ಕಿತೋ ನಿನಗೆ ಪಂಥಾ— ॥ ೧೮ ॥

ಧುರದೊಳೀಪರಿ ಚೆರ‍್ಯದಿಂದ-ಬಿಡದೆಕಾದಿ-ಅರಿನೃಪರನು ಗೆಲ್ದು ರಾಯರ-ಮೆಚ್ಚಿಸಿ-ಹರುಷದಿ ಮುಮ್ಮಡಿ ತಮ್ಮ-ಭೂಪಾಲನ-ನೆರೆ ಸಂಸ್ಥಾನವ ನುಂಟು-ಮಾಡಲು-ಕ ಕೋ-ದ್ಗಿರಿ ಗಂಗಾಧರೇಶನಗೊಂಡು-ಬಲಗೊಂಡು ॥ ಹರುಷದಿ ಮುಮ್ಮಡಿ ಪರಮೂರ್ತಿ. ಹಲಸೂರ ಸೋಮೇಶ್ವರ ದಯವೆರಸಿ-ಶ್ರೀ ಗುಮ್ಮಳಾ-ಪುರದ ಸದ್ಗುರು ನಂಜೇಶ್ವರನ-ಕೃಪೆಯ ಸಮಾಪ್ತಾ ॥ ಪಡೆದು ಸೌಖ್ಯ-ಕರ ವಿರಾಜಿಪ ಕಲಾಪಾ-ಯಲಹಂಕನಾ-ಡೆರೆಯ, ಮೋಹನ್ನರೂಪಾ-ಸುಖದಿ, ಸು-ಸ್ಥಿರಬಾಳು ಸುಪ್ರತಾಪಾ-ನಾಚಯಕೆಂಪ-ಧರಣೀಶನಣುಗ, ಯಿಮ್ಮಡಿ ಕೆಂಪ ಭೂಪಾ— ॥ ೧೯ ॥

ಮಂಗಳಾ ಮಹಾ ಶ್ರೀ ಶ್ರೀ ಶ್ರೀ

# ಕೆಂಪೇಗೌಡನ ಜಯಪ್ರಶಸ್ತಿ

## ಎರಡನೆಯ ಭಾಗ

ಶ್ರೀ ಗಣಾಧಿಪತಯೇ ನಮಃ - ಶ್ರೀ ಶಾರದಾಂಬಾಯ ನಮಃ
ಶ್ರೀ ಗಂಗಾಧರ ಲಿಂಗಾಯ ನಮಃ
ಶುಭಮಸ್ತು

ಧಾರುಣಿಯೊಳಿದಿ ರಾರು ನಿನಗೆ-ಭಳಿರೆ-ವೀರವಿಕ್ರಮ ಯಿಮ್ಮಡಿ ಕೆಂಪ ದೊರೆರಾಯಾ— || ಪಲ್ಲವಿ ||

ಶ್ರೀಮತೆಲಹ [ಂ] ಕನಾಡ, ವರಶಾಸನೋದ್ಧಾರಾ। ಭೂಮೀಶ ಧೀರ ಕೆಂಪೇಂದ್ರನ ಕುಮಾರಾ। ಸಂ। ಗ್ರಾಮ ಪಾರ್ಥಿವ, ಯಿಮ್ಮಡಿ ಕೆಂಪದೊರೆ ರಾಯಾ। ನಿ। ಸ್ಸೀಮ ಸಾಮ್ರಾಜ್ಯ ಸೌಖ್ಯದಲಿ || ಸ್ವಾಮಿ ಗಂಗಾಧರೇಶ್ವರನ ಕರುಣದಲಿ। ಸು। ಪ್ರೇಮದಿಂ ಸಿಂಹಾಸನದೊಳಗಮರ್ದೋಲಗದಿ। ಕಾಮಿ ಸಿಗೆ, ರಾಯಪಟ್ಟವ ನಿಲಿಸಬೇಕೆಂದು। ನೇಮಿಸಿರೆ ಮಂತ್ರಿ ಜನರೊಡನೆ, ಸಾರ್ವ। ಭೌಮ, ನಿನಗೆಣೆಯೆ ಪ್ರಭು ಕುಲಶಿರೋಮಣಿಯೇ— || ೧ ||
ಧಾರುಣಿಯೊದಿಳಿರಾರು ನಿನಗೇ—

ನರಪತಿಯ ಸಿಂಹಾಸನಕೆ ದಿಕ್ಕಿಲ್ಲ ದಿರಲು। ನೆರೆಹೊರೆಯು, ದೊರೆ, ಮನ್ನೆಯರು ಗರ್ವದಿಂದ ।ಮೇ। ಲರಿಯದೆಯು ಸೀಮೆಭೂಮಿಯ ಸೂರೆ ಮಾಡಿ ।ಸಂ। ಹರಿಸಿ ರಾಜ್ಯವ ಕಟ್ಟಿಕೊಂಡೂ || ಭರದಿ ಪೆನುಗೊಂಡೆಯ ದುರ್ಗಕ್ಕೆ ಮುತ್ತಿಗೆಯ ।ಹಾ। ಕಿರಲು ಬಾಳ್ಪೆಯಗಾಸ್ಪದವಿತ್ತು, ಬೇಗ। ರಾ। ಯರಿಗೆ ಬಿನ್ನೈಸೆ ರಾಯಸಗಳನು ಬರೆಸಿ। ವುಡು। ಗೊರೆ, ಭೂಷಣ, ಸುವಸ್ತು ಗಳನ್ನು ಕಳುಹಿ। ವರಮಂತ್ರಿಗಳ ಮುಖಾಂತ್ರದಿ ಕಾರ್ಯವಿಡಿದೇ—|| ೨ ||
ಧಾರುಣಿಯೊಳಿದಿರಾರು ನಿನಗೇ—

ಚದುರತನದಿಂದ ರಾಯರಿಗೆ। ಜಗದಿನೀನು। ಕದಲಿ ಬ ರ ಹೇ ಳಿ ಬಿನ್ನೈಸಿ। ಕಳುಹಿದ ಕಾರ್ಯ। ಹದನಿದಹುದೆಂದು ಆ ಕ್ಷ ಣ ದಿ। ದೊರೆ ಮನ್ನೆಯರ। ಪದುಳದಿಂದಲಿ ಕೂಡಿಕೊಂಡೂ || [ಮಿಗೆ] ಸೊ। ಕ್ಕಿದ, ಮದ ಗಜ ಘಟೆಗಳು ಮುನ್ನೂರು। ಬಗೆಬಗೆಯಲಿ। ಕುದುರೆ ನಾಲ್ಕೈದು ಸಾವಿರ

ದೊಂಟಿಗಳ। ಮೇಲೆ। ವೊದಗಿ ಬಹ ಝಲ್ಲಿ ಪಟ್ಟೆಯ, ಪಟ್ಟೆಗೆಯ। ಬೊಕ್ಕ। ಸದ ಗುಡಾರವು ಲೆಕ್ಕವಿಲ್ಲಾ। ದಂಡಿನ। ಪದವಿಯನು ಪೇಳಲಳವಲ್ಲ ದೊರೆರಾಯ— ॥ ೩ ॥

ಧಾರುಣಿಯೊಳಿದಿರಾರು ನಿನಗೇ—

ರಾಜಾಧಿರಾಜರೆಲ್ಲರು ಕೂಡಿದರು। ತಿಮ್ಮ। ರಾಜನು ಸಹಿತ ರಂಗಪತಿ ರಾಜ। ಮಿಗೆವಾಕ। ರಾಜ, ನಂದ್ಯಾಲ ವೆಂಕಪರಾಜ। ಅಳಿಯೊಬ್ಬ। ರಾಜ ಶ್ರೀರಂಗ ಪತಿರಾಜ। ಸಹಿತ। ರಾಜ ರವಿತೇಜರಂದ ದೊಳರಸು ಮನ್ನೆಯರು ॥ ತೇಜರವಿ ಪಂತಿಯೂಟವನುಂಬುವರು। ಮೂರ್ತಿ। ರಾಜ ವೊದಲಾದ ಬಾಂಧವರು। ವೆಂಕಟದೇವ। ರಾಜರಾಯರ ಸಮ್ಮುಖದೊಳೂ। ನಡೆದ। ಪೌಜನೇನೆಂಬೆ ನೂತನ ಭೋಜರಾಜಾ— ॥ ೪ ॥

ಧಾರುಣಿಯೊಳಿದಿರಾರು ನಿನಗೇ—

ನೆಲಿಗೋಟೆ ತಿಮ್ಮನಾಯಕನು। ದಾಮೆರ್ಲಿ। ಚಲದಂಕ ವೆಂಕಟಪ್ಪ ನಾಯಕನು। ದಾವೆಳ। ಚಲುವ ವೆಂಕಟನಾಯಕ। ಸಲೆ ರಾಮುಭದ್ರನೃಪ। ಬಲುಗಡೆಯರೆಲ್ಲರುಂ, ಮನ್ನೆಯರೂ ॥ ದಳವಾಯಿ, ಪಾಪಯ್ಯ, ಪವಡದ ಕೃಷ್ಣಮ್ಮ(ಪ್ಪ?)। ವಿಲಸಿತ ಸುಕೀರ್ತಿ, ಚವರದ, ನಾರಣೇಂದ್ರ ಸಹ। ಗೆಲುಗೈಯ್ಯ ಭೂವರರೂ ॥ ತೆಲುಗ ದೊರೆಗಳು ಕೂಡಿ,। ಬಲವಂತ ರೋಲಾಯರೆಡ। ಬಲದಿ ನಡೆವ ಬಲವನೇನೆಂಬೆ ನೂತನ ದಾನಶೂರಾ— ॥ ೫ ॥

ಧಾರುಣಿಯೊಳಿದಿರಾರು ನಿನಗೇ—

ಜಗದೇವರಾಯ, ಚಿಕ್ಕರಾಯ,। ತಮ್ಮಯ್ಯಗೌಡ। ಬಗೆಬಗೆಯ ಪಾಳ್ಯಗಾರರು ವಜ್ಜೀರರು। ದೊರೆಗಳಿಗೆ ಲೆಕ್ಕಮಿತಿಯಿಲ್ಲದಿಹ ಸೇನೆ। ಮಾರ್ಬಲದ। ಸೊಗಸ ಬಣ್ಣಿಸುವಡಳವಲ್ಲಾ ॥ ಮೇಲು-ಜಗಳಕನುವಾದ ಪ ಟು ಭ ಟರು ವೂಳಿಗದವರು। ಮಿಗೆ, ವೀರ ವಿಕ್ರಮಾರ್ಕರು ರಾಯರಾಹುತರು। ಸುಗುಣ ಮಂತ್ರಿಪ್ರಧಾನರು, ರಾಣಿವಾಸ, ದಂ। ಡಿಗೆಯ ಪಲ್ಲಕ್ಕಿ ಸಾಲುಗಳಾ। ಯಿನ್ನು-ಪೊಗಳಲರಿದೈಯ್ಯ, ಯಿಮ್ಮಡಿ ಕೆಂಪರಾಯಾ— ॥ ೬ ॥

ಧಾರುಣಿಯೊಳಿದಿರಾರು ನಿನಗೇ—

ದಿಕ್ಕು ದಿಕ್ಕಿನ ಮನ್ನೆ ಮನ್ನೆಯರು । ಮಾರ್ಬಲವು । ಲೆಕ್ಕವಿಲ್ಲದ ಪಾಯಿ ದಳವು । ಸಮರಕ್ಕೆ । ಸೊಕ್ಕಿದಾನೆಗಳು. ಮಾವುತರು । ತುರುಗರೆವಂತ । ರಿಕ್ಕೆಲದಿ ನಡೆವ ಪೌಜುಗಳು । [ಬಳಿ] ಕಿನ್ನು । ಮಿಕ್ಕ ಮಾತೇನು ಕೂರ್ಮನ ಬೆನ್ನು । ಕುಸಿದಪ್ಪ । ದಿಕ್ಕುಗಳು ಬೆದರೆ, ದಿಕ್ಕರಿ, ಜರಿಯೆ । ನೆಲಬಿರಿಯೆ । ಮುಕ್ಕಣ್ಣ ಶಿವಬಲ್ಲರಾಯ । ದಂಡಿಗೆ, ಯದಿ । ರಿಕ್ಕಿ ತರುವರಿಲ್ಲವೆನಲೂ । ಧೂರಕ್ಕೆ । ದಕ್ಕಡಿಯ ಬಲವನೇನೆಂಬೆ ದೊರೆರಾಯಾ— ॥ ೭ ॥

ಧಾರುಣಿಯೊಳಿದಿರಾರು ನಿನಗೇ—

ಖುಮಿಯಾದ ರಾಜಾಧಿರಾಜರು । ವಜ್ಜೀರರು । ಪ್ರಮುಖ ನಾಯಕರು ಧೊರೆ ಧೊರೆಗಳು । ಮನ್ನೆಯರು । ಸುಮುಖವಾ[1]ಗಿ ನಡೆದು ವಿನಯದಲಿ । ರಾಯರ । ಸುಮುಖದ ಸಲಾಮನು ಮಾಡಿ ನಿಲಲೂ । ಬಲು । ಸಮುಖನಾಗಿ ಸಲಾಮನು ಮಾಡಿ ನಿಲಲೂ । ಬಲು । ಸುಮುಖನಾಗಿ ರಾಯರೋಲಗ ವಿತ್ತು । ಹರುಷದಿ ॥ ನಿಖಿಳಾಧಿಪತಿಗೆ ಮನ್ನಣೆ ಕೊಟ್ಟು । ಕಾರ್ಯಕಭಿ । ಮುಖವಾಗಿ ನಡೆಯೆಂದು, ಕದಲಿ, ನೆಲ್ಲಿ । ಪಪ್ಲ ಕಣಿವೆ । ಮುಖದಲ್ಲಿ ರಾಯಗ ದಂಡಿಳಿಯೆ । ಬೇಗ । ಸುಖದಿ ಕಣಿವೆಯ ದಾಟಿದರು, ಭಾನುತೇಜಾ ॥೮॥

ಧಾರುಣಿಯೊಳಿದಿರಾರು, ನಿನಗೇ—

ಮಾಕಾರ್ಯಕಿನ್ನು ಯೋಚನೆಯೇಕೆನುತಾ ॥ ಕದೆಲ । ಬೇಕೆಂದು ಪಯಣದ ಮೇಲೆ ಬಂದು । ಬಲು । ಮಾಕೆಗಳು ಕೋಗಿಲೇರಿನೊಳಿಳಿದು । ಮುಂದಕ್ಕೆ । ನೂಕಿ ದಂಡನು ತೆರಳಲಂಜೀ । ಕೂಡೆ । ಯೇಕಾಂತವಾಡಿ, ರಾಯರು, ಮಂತ್ರಿಗಳು । ಸಹಿತ । ಯೇಕ ಯೋಚನೆಯ ಯೋಚಿಸುತ, । ನೃಪ। ಮನ್ನೆಯರು । ಯೇಕವಾಗಿಯೆ ಮಾತನಾಡಿ ವಂದು । ಅನುವನು ವಿ। ವೇಕ ದಿಂದಲಿ ಯೋಚಿಸಿದರೂ । ನಿನ್ನ ಡಾಕದೆಂತುಟೋ, ಭಳಿರೆ, ರಣ ರಂಗಶೂರಾ— ॥ ೯ ॥

ಧಾರುಣಿಯೊಳಿದಿರಾರು, ನಿನಗೇ—

ಕರೆಸಿ, ವರ, ಮಂತ್ರಿಗಳೊಡನೆ ರಾಯ । ನಿಂತೆಂದ । ಮೊರಸ [2]ಮನ್ನೆಯರೇಕಮುಖವಾಗಿ । ದಂಡು । ತೆರಳಿ, ನಡೆವದು ಹೇಗೆನುತ್ತಲನು

[1]ಮನ್ನೆಯರೇಕಮುಖವಾಗಿ [2]ಬಲುಮುರು ಸೀಗಿರಲು

ಮಾನಿಸಲು ॥ ಹರುಷವನು ಹೇಳಿ ಮಂತ್ರಿಗಳು । ಇನ್ನು । ವರಸತ್ಯಭಾಷೆ ಹರಿಶ್ಚಂದ್ರ, ಮರೆಹೊಕ್ಕವರ । ಕಾರ್ಯ । ಬಿರುದಿನ ವಜೀರ, ಯಿಮ್ಮಡಿಕೆಂಪ। ದೊರೆರಾಯ ಸಂಬುಗೆಯ ಕೊಟ್ಟು ತಪ್ಪುವನಲ್ಲಾ । ನೆರೆನಂಬಿ ನಡೆಯಿ ನೀವೆನಲಾ । ಚಿತ್ತಕ್ಕೆ । ಪರಿತಂದು ರಾಯ ನಿಮ್ಮನು ಮೆಚ್ಚುತಿರಲೂ ॥ ೧೦ ॥

ಧಾರುಣಿಯೊಳಿದಿರಾರು ನಿನಗೇ—

ವದಗಿ ರಾಯರ ದಂಡು, ಬೇತಮಂಗಲಕಿಳಿದು । ಕದನ ವಿಕ್ರಮ ಕೆಂಪ ದೊರೆರಾಯ ನಮಗೊಂದು । ಪದಿಲವಾಗಿಯೆ, ನಂಬುಗಿಗೆಯನೀಯ್ಯಬೇಕೆನಲು। ಮುದದಿ, ರಾಯರಿಗೆ, ಹರುಷವನು ಕೊಟ್ಟು ॥ ಪದುಳದಲಿ ರಾಯದಳವನು ಕೂಡಿಕೊಂಡು । ಬಿಂಕದಲಿ ನೃಪದೊರೆ ಮನ್ನೆಯರ, ತರಲಿ । ಬರಹೇಳಿದರೆ, ದೊರೆ ದೊರೆ ವಜ್ಜೀರರು ಬಲವು । ಸಹಿತ, ಬೇಗದಲಿ ನಡೆತಂದ ರೊಗ್ಗನಲಿ । ಭಳಿರೆ । ಕದನಕದ, ಚೌಪಟಮಲ್ಲ, ನವಕಬ್ಬುವಿಲ್ಲಾ— ॥ ೧೧ ॥

ಧಾರುಣಿಯೊಳಿದಿರಾರು ನಿನಗೇ—*

ತಳತಂತ್ರ ಮಾರ್ಬಲಂಗಳೊಳು, ಠೀವಿಯಲಿ । ಬಹ । ದಳವಾಯಿಕರು ಪಾಳ್ಯೆಪಾಳ್ಯೆಗಾರರನೆಲ್ಲ । ದಳಕೊಂಡು, ಪರಬಲದಿ, ಬಾಳ, ಚತುರಂಗ । ಪಾಯ । ದಳ ಸಂದಣಿಯು, ಯಮ ಸಂದಣಿಯಾ ॥ ಪೊಗಳಡಳವಲ್ಲ ಕಾರ್ಯ, ಖಡ್ಗವ, ತಿಳಿವ ಮಂತ್ರಿಗಳು । ಬೆಳವಿಗೆಯ, ಸರಸಪ್ತದಾರಿ, ದಳವಾಯಿಗಳು। ಅಳಿಯ ವರ್ಗಗಳೂಳಿಗದ, ಪೈಕವಾ । ಶೌರ್ಯ । ಗಳ ಮೆರೆವ ರಾಯ ರಾಹುತರು । ಭೂ । ವಳಯಮೊಳು ನಿನ್ನ ಪರಿವಾರಕೆಣೆಯಿಲ್ಲಾ— ॥೧೩॥

ಧಾರುಣಿಯೊಳಿದಿರಾರು ನಿನಗೇ—

ಕೆರೆಯೂರ, ತಿಮ್ಮನಾಯಕ ವಜೀರನು । ಸುತ್ತ । ಣರಸುಗಳು ಹೊಸಕೋಟೆಯ ಧೊರೆ, ತಮ್ಮಧೀರಾ । ಭಾ । ಸುರತೇಜ, ದೇವಂಡಹಳ್ಳಿಯ ಜೇನಭೈರ । ಭೂ । ವರಚಿಕ್ಕಬಲ್ಲಾಳ ಪುರದಾ । ಮೇಲು । ಧುರಧೀರ ಬೈರೇಂದ್ರ, ಮೈಸೂರವರು । ಮಾಸ್ತಿ । ಕರಿಯೇಂದ್ರ, ಜವ್ವಾದಿ ನರವೀರ

* ಮೂಲಪ್ರತಿಯಲ್ಲಿ ಇಲ್ಲಿ ಪದ್ಯ ಸಂಖ್ಯೆ ೧೨ ಹಾಕಿದೆ. ಇದು ಲೇಖನ ದೋಷವೋ? ಇಲ್ಲವೇ ೧೧ನೆಯ ಹಾಡು ಬರೆಯುವಾಗ ಕೈಬಿಟ್ಟದೆಯೋ? ಯಾವುದೂ ಗೊತ್ತಾಗದಾಗಿದೆ. ಸಂ॥

ನೃಪನು । ಸಂ । ಗರಶೂರ, ಹೊಸವೂರ, ಚಂದ್ರಶೇಖರನು । ಭೂ । ವರ ಬಾಗಲೂರ, ಯೇರ್ರೇಂದ್ರ । ಸಕಲ । ದೊರೆಗಳನು ಕೂಡಿರಾ ಯರ ನಿದಿರ್ಗೊಂಡೇ— ॥೧೩॥

ಧಾರುಣಿಯೊಳಿದಿರಾರು ನಿನಗೇ—

ವಿನಯದಿಂದಲಿ ವೆಂಕಟಪತಿರಾಯರನು । ಮನವೊಲಿದು ಕಂಡು ಮನ್ನಣೆ ಗೊಂಡು । ಭೂ । ಷಣವ, ಘನರಾಮಭದ್ರನೆಂಬಾನೆಯನು । ತುರಗವನು । ಮನವೊಲಿದು ಕಾಣಿಕೆಯ ಕೊಟ್ಟು । ಮುಂದ । ಣನುವನೆಲ್ಲವನು, ಬಿನ್ನೈಸಿ, ರಾಯರ, । ಕಾರ್ಯ । ದನುವನೆಲ್ಲವ ತಿಳಿದು ಸನ್ಮಾನದಿಂದ । ನಿಂ । ನನುವಿ ನೊಳು ಬಂದ ದೊರೆ ಮನ್ನೆಯರ ಕಾಣಿಸಿ । ಭು । ವನದೊಳಗೆ ಕೀರ್ತಿಯನು ಪಡೆದೇ । ಭಳಿರೆ । ವನಧಿ ಗಂಭೀರ, ಮೋಹನ, ಮೇರು, ಧೀರಾ– ॥ ೧೪ ॥

ಧಾರುಣಿಯೊಳಿದಿರಾರು ನಿನಗೇ—

ಅರಿರಾಯರ ಶರಭಭೇರುಂಡ, ರಾಯರ ಗಂಡ । ತೆರಳಿ ನಡೆಯೆಂದು ನೇಮಿಸಿ ಭೇರಿಯನು ಪೊಯ್ಸಿ । ಪರಿಪರಿಯ ಚತುರಂಗ ಪಾಯದಳವನು ಕೂಡಿ । ಧೊರೆ ಮನ್ನೆಯರ ಸಂಭ್ರಮದಲೀ ॥ ಕದಲಿ ಧುರಧೀರ, ವಿಕ್ರಮದಿ, ದಿಗ್ವಿಜಯದಿಂ । ಬಿರಿದು ಮುಕ್ಕಣ್ಣನೇ ಝುದ (?) ಬಸವ ಟಿಕ್ಕೆಯಿಂ। ಮೊರೆವ ಭಟರುಗಳು ಕೊಂಡಾಡೆ ಶುಭಲಗ್ನದಲಿ । ತೆರಳಿ, ನೀ, ಪಯಣದಲಿ ನಡೆದೆ, । ವರ ಪುಷ್ಪಕೋದಂಡ–ಆಹವೋದ್ದಂಡ ॥ ೧೫ ॥

ಧಾರುಣಿಯೊಳಿದಿರಾರು ನಿನಗೇ—

ಹರುಷದಲಿ ಬಲ್ಲಾಳಪುರದ ಪರಿಯಂತರವು । ಹರಿದು ಧಾಳಿಯ ಮಾಡಿ ಸೆರೆ ಸೂರೆಯಾಡಿ । ಸಂ । ಗರದಿ, ಮಾರಾಂತರನು ಕಡಿದು, ರಾಜ್ಯವನಿರಿದು । ಹಿರಿಯ ಬಲ್ಲಾಳಪುರಕಿಳಿಯೆ । ಮೇಲ । ನರಿದು ದಳವಾಯಿಕ ತಮ್ಮಧೀರ । ಸಂಧಾನಕ್ಕೆ । ಭರವಸದ ನಂಬುಗೆಯ ಕೇಳೆ । ಆಕ್ಷಣ ಕೊಟ್ಟು । ವರಭೂಷಣವ ರಾಜಹಂಸ । ಮುತ್ತಿನ ಚಂಡೆನಿಪ । ಕರಿಗಳನು ವಸ್ತುವಾಜಿಗಳಾ । ರಾಯರಿಗೆ– ವಪ್ಪಿಸಿ ವಿಕ್ರಮನೆನುತೆಕೊಂಡೇ— ॥ ೧೬ ॥

ಧಾರುಣಿಯೊಳಿದಿರಾರು ನಿನಗೇ—

ಆಲಸ್ಯವನು ಮಾಡದತಿ ಬೇಗ, । ಪಲವಳೀ । ಬಾಲ್ಯೆಯನನು ಕರೆಸಿ ರಾಯರನು । ಕಾಣಿಸಿಯು । ಮೇಲಾದ, ತಾಲಿ, ಚೌಕುಳಿ ಪದಕ । ಭೂಷಣವ । ಪಾಲಿಸಿ ಶಭಾಸುಯೆಂದೆನುತಾ ॥ ಲೀಲೆಯಿಂದಲಿ, ಕೆಲವು ರಾಜ್ಯವನು । ಕೊಟ್ಟುಸಂ । ಭಾಳಿಸಿಯು ಮುದಂಡನಡೆದು । ಮುದಿಗೆರೆಯಲ್ಲಿ । ಪಾಳಯಂಗಳ ನಿಳಿಸಿ, ಬಲು ಪರಾಕ್ರಮದಿಂದ ॥ ಭಾಳಲೋಚನನ ಕೃಪೆವಿಡಿದೂ ।ಸ್ಥಿರದಿ । ಬಾಳು ಸಂಗರಶೂರ, ಬಲುನೇಮುಗಾರಾ— ॥೧೭॥

ಧಾರುಣಿಯೊಳಿದಿರಾರು ನಿನಗೇ—

ಭರದಿ ಮುಂದಂಡುಗಳು ತೆರಳಿ । ಕಡಕತ್ತೂರ । ಕೆರೆಯುಬ್ಬಿನಲಿ ಪಾಳೆಯ ವಿಳಿಸಿ । ಸೀರೆಯದ । ಅರಸು ರಂಗೇಂದ್ರನನು ಕರೆಸಿ, ರಾಯರ ಸಂಧಿಸೀ॥ ಬಿರುದು ರಣಭೈರಪನೆನಿಪಾ ಗಜವ । ತುರಗಗಳು । ವರಭೂಷಣಂಗಳನು ಕೊಡಿಸೀ ॥ ಸರಸದಿಂದಲಿ, ಚಲುವರಾಯನೆನಿಪ । ಆನೆಯನು । ಹರುಷದಲಿ ಸೀರೆಯದವರ ಕೈಯ್ಯ । ತೆ ಕ್ಕೊಂಡೆ । ಅರಿರಾಯ ವಜ್ರದಂಡಾ ನಿನಗೆ । ಸರಿಯಾರೊ ಜಗದಿ ಯಿಮ್ಮಡಿ ಕೆಂಪರಾಯಾ— ॥ ೧೮ ॥

ಧಾರುಣಿ ಯೊಳಿದಿರಾರು ನಿನಗೇ—

ಧರೆಯೊಳಗೆ ಗುರುತಾದ ಮನ್ನೆಯರು । ಸಹಿತ । ಬಿರುದಿನ ವಜೀರ, ಪ್ರಮುಖರಾದಿ[1] । ಭೂವರರ । ಕರಕೊಂಡು ಪೆನುಗೊಂಡೆಯನು । ಕಟ್ಟುಕೊಂಡು, ರಾ । ಯರಿಗೆ ಪಟ್ಟಣವನಪ್ಪೈಸಿ ॥ ಹರುಷದಲಿ ಪಾಳ್ಯದೊಳರಸುಗಳ । ನಿಲಿಸಿ । ನೆರೆಯೋಧಿಯೆನಿಸಿ, ರಾಯರ, ಚಿತ್ತವ । ಮೆಚ್ಚಿಸಿ ನೀ । ಪಿರಿದಾಗಿ ವಾರ್ತೆಯನು ಪಡೆದೇ ॥ ದೊರೆಗಳ ದೇವ, ನೆರೆದಾತ, ರಾಯ್ಸ, ನೀನಹುದೋ । ಭಳಿರೆ । ಪರಬಲಾಂತರ ಭೀಮ-ಬಾಹು ಬಲರಾಮ ॥ ೧೯ ॥

ಧಾರುಣಿಯೊಳಿದಿರಾರು ನಿನಗೇ—

ಭಾವಸಂವತ್ಸರದ ಮಾಘ ಶುದ್ಧ । ಪಂಚಮಿಯಲ್ಲಿ । ಭಾವಿಸಿಯು ಸುಮುಹೂರ್ತದಲ್ಲಿ । ಶುಭಲಗ್ನದಲಿ । ಶ್ರೀವಿಜಯನಾಗೆಂದು, ಸಿಂಹಾಸನದಿ ವೆಂಕಟಪತಿ । ದೇವರಾಯರಿಗೆ, ಪಟ್ಟವನ್ನೂ ॥ ಠೀವಿಯಿಂದಲಿ ಕಟ್ಟೆಭೂವರರು । ಕೊಂಡಾಡೆ । ಪಾವನ ಚರಿತ್ರನೀ ರಾಯಕಾರ್ಯವ ನಿಲಿಸಿ । ಯೀ

[1] ನಿಮು ಖಯೋಗಿ

ವಸುಧೆಯಲ್ಲಿ, ರವಿ, ಚಂದ್ರರುಳ್ಳನಕ । ಬಲ । ತೀವಿದ ಸುಕೀರ್ತಿಯನು ಪಡೆದೆ । ಸುಪ್ರ । ಭಾವ ನೀನಹುದೋ ಯಿಮ್ಮಡಿ ಕೆಂಪರಾಯಾ ॥ ೨೦ ॥

ಧಾರುಣಿಯೊಳಿದಿರಾರು ನಿನಗೇ—

ಸಂತೈಸಿ ರಾಯರೋಲಗಕೆ ನೀ ನಡೆತಂದು । ಅಂತರಂಗವ ತಿಳಿದು ನೃಪ ಮನ್ನೆಮನ್ನೆಯರ । ಅಂತರವನರಿದು ಕಾಣಿಸಿ, ಪಗುದಿಗಳ ಕೊಡಿಸಿ । ಚಿಂತೆಯನು ಬಿಡಿಸಿ ನೀಕಾಯಿದೆ ॥ ಪಂಥದಲಿ ಮೈಸೂರವರ ಕರಸಿ ರಾಯರಿಗೆ । ಸಂತೋಷದಿಂದಾಣಿ ಮುತ್ತೆನಿಪ ಮದಗಜವ । ಕಾಂತಿ ಮುತ್ತಾರನದು, ಕರ, ಕಂಠ, ಮಾಲೆ, ಸರ । ಮುಂತಾದ ಭೂಷಣಾಂಬರವ ಕೊಡಿಸಿ । ಯಿಂತು ಝಸವಾಂತ ಯಿಮ್ಮಡಿ ಕೆಂಪರಾಯಾ — ॥೨೧॥

ಧಾರುಣಿಯೊಳಿದಿರಾರು ನಿನಗೇ—

ಶ್ರೀಮನ್ಮಹಾ ಮಂಡಲ ರಾಜಾಧಿರಾಜರ । ಆ ಮಹಾವೀರ ವೆಂಕಟರಾಯ ಭೋಜ । ನಿ । ಸ್ಸೀಮ ಸಿಂಹಾಸನಕೆನಲುಪಸೀಮೆಯ । ನೃಪಲ। ಲಾಮ ನೀ ಬಿಡಿಸಬೇಕೆನ್ನಲು ॥ ತಾಮಸವ ಮಾಡದೆ ಯೀ ತೆರದಲಿ ನಡೆಯೆನುತ ।ಸಂ। ಗ್ರಾಮಭೀಮನ ತೆರದಿ ದೊರೆ ಮನ್ನೆ ಮನ್ನೆಯರ । ಸ್ತೋಮದಿಂ ಕೂಡಿ ಮುಂದಂಡ ನಡೆದೆಯೋ । ಸಾರ್ವ । ಭೌಮ, ದಿಗ್ವಿಜಯ ಸುತ್ರಾಮಾ ಭಳಿರೆ । ಸ್ವಾಮಿ ದ್ರೋಹರ ಗಂಡ-ಆಹವೋದ್ದಂಡಾ— ॥ ೨೨ ॥

ಧಾರುಣಿಯೊಳಿದಿರಾರು ನಿನಗೇ —

ಥಾಳಿ ಮಾಡಿಯೆ ವಸಂತನ ಸೀಮೆ। ಭೂಮಿಯನು। ಹಾಳು ಮಾಡಿಯೆ ಮಲೆತ ಕೋಟೆಗಳ। ನಾ ಕ್ಷಣದಿ। ಧೂಳಿಕೋಟೆಗೊಂಡು ಕೋಲಾಹಲವ। ಮಾಡೆ। ಬಾಳಚಿಂತಿಸಿ ವಸಂತ ನೃಪಾ ॥ ತಾಳಲಾರದೆ, ಭಯದಿ, ತಲ್ಲಣಿಸಿ,। ಮನದೊಳಗೆ। ಆಳೋಚನೆಯ ಮಾಡಿ, ಅತಿಬೇಗ ।ವಿನಯದಲಿ। ಪಾಳೆಯಕೆ ಬಂದು, ನಿಮ್ಮಡಿಗಳಿಗೆ ।ಶರಣೆಂದು। ಹೇಳಿ ಬಿರುದುಗಳಿತ್ತು ಬೇಡಿಕೊಳಲೂ । ಮನ್ನಿಸಿ । ಹಾಳಿತವನಿತ್ತು ಸಲಹಿದೆ ಕೆಂಪರಾಯಾ— ॥ ೨೩ ॥

ಧಾರುಣಿಯೊಳಿದಿರಾರು ನಿನಗೇ—

ಅಲ್ಲಿಂದ ಮಲೆಯ ಹಂಪನ ಸೀಮೆ ಗಂಡಲದು । ಬೇಗಂ । ದಲ್ಲಿ ಬಂದು ಕೊಟ್ಟೆ ಪುರವನೂ । ಮೆಟ್ಟೆ ತುರುಗಳನು ಹಿಡಿದು । ಮಿಗೆ ದಂಡೆತ್ತಿ । ಪಟ್ಟಣ

ಸುತ್ತಿ ಮುಸುಕಿಯಾ ಸೀಮೆ ಭೂಮಿಯನು ‖ ಭಂಡುಮಾಡಿಯೆ ಮಲೆತವರ
ತಲೆಯ । ಚಂಡಾಡಿ । ಕೊಂಡು ಹಂಡೆಯ ಹಂಪನೃಪನು । ಬೇಗದಿ
ಬಂದು । ದಿಂಡುಗಡೆದು ಪದವ ಕಂಡು ಮರೆಯೊಗಲು ಮನ್ನಿಸಿದೇ ‖
ಮಂಡಲಾಧಿಪ ನೀನು, । ಭೂ । ಮಂಡಳದ ರಾಯರೆಂಬ ಹಕ್ಕಿಗೆ ನೀನುಗಂಡಾ।
ಸಲುವಕೆಂಪರಾಯ ಪ್ರಚಂಡ । ವಿಕ್ರಮ ವೈರಿಗಂಡ, ಮಾರ್ತಾಂಡ ‖ ೨೪ ‖

ಧಾರುಣಿಯೊಳಿದಿರಾರು ನಿನಗೇ—

ಅಷ್ಟದಿಕ್ಕಿನ ದೊರೆಗಳೆಲ್ಲ, ಹಲಶಿ, ಲೋಳ । ಪಟ್ಟಣಗಳೆಲ್ಲ ತುಳಶಾ
ಪುರ, ಕಲುಬರಗಿ, । ವಿಜಾಪುರ, । ವೊರುಗಲ್ಲ ಹಂಮ್ಮ ನಗರವೆಲ್ಲ । ಯಿವೆಲ್ಲಿಯ
ಪ್ರಳಯವೆಂದು‖ ಘಟ್ಟ, ತುಳ, ಮಲೆಯಾಳವೆಲ್ಲಿದ್ದಂ । ಗಷ್ಟದಿಗ್ಮಂಡಲದೊಳಿಪ್ಪ
ಭೂವಲ್ಲಭರು। ಬೆದರಿ ಬಾಯಿಬಿಡುತಳಲೀ ‖ ವೈರಿನೃಪರೆಲ್ಲರೂ, ವಿಧಿಯದೂರು
ವರೂ । ಜಗಕೆ । ಬಲ್ಲಿದನೆ, ಮುಕ್ಕಣ್ಣ ಭಲ್ಲೆದರಾಯಾ— ‖ ೨೫ ‖

ಧಾರುಣಿಯೊಳಿದಿರಾರು ನಿನಗೇ—

ಕೆಂಪರಾಯ ನೆನಲು ಕಂಪಿಸುತಿಹರು ನೃಪರು । ಯಿಂಪುಗೊಂಡರೆ ಕದನ
ಸೊಂಪುಗಳ ನೆರೆಬಿಟ್ಟು । ಗುಂಪಿನ ಭಟರ ಕರೆದು ಕಪ್ಪಕಾಣಿಕೆಯಿಟ್ಟೊ ।
ತಂಪಿನೊಳು ನಮ್ಮ ಪೊರೆಯೆಂದು ನಿನ ಛತ್ರ । ದಿಂಪಿನೊಳು, ಸೌರಕ್ಷಿಸೆಂದೂ‖
ಕಂಪಿಸುವರನು ಕರೆದು ಅಭಯ ಹಸ್ತದಿ। ಕೈಯ್ಯನೀಡಿ ಕಾಪಾಡಿದೆ, ದೊರೆಯೇ
ನಿನಗೆಣೆಯೇ— ‖ ೨೬ ‖

ಧಾರುಣಿಯೊಳಿದಿರಾರು ನಿನಗೇ—

ಸರಸದಿಂದಲಿ ವೂಟಕೂರ । ಪಾಳಯದಿಂದ । ದುರುಸು ಮಾಡಿಯೆ,
ಬಿಜ್ಜಾವರದ । ಸೀಮೆಗೆಧಾಳಿ । ವರಿದು ಸೂರೆಯ ನಾಡೆ ಶರಣೆಂದು । ಮರೆ
ಹೊಗಲು। ಕರೆಸಿಂಮ್ಮಡಿ ಚಿಕ್ಕ ನೃಪನಾ ಕಾಯಿದು‖ ವರತುರಗ ಭೂಷಣ
ಸುವಸ್ತು । ಬಲುರೊಕ್ಕವನು । ತೆರಸಿ ರಾಜ್ಯವ ಬಿಡಿಸಿ ಬಳಿಕ । ರಾಯರನು ‖
ಕರುಣಿಸಿ ನಂಬುಗೆಯ ಕೊಡಿಸಿ । ದರಸುತನ ಲೇಸು ಲೇಸಯ್ಯಾ । ಭಳಿರೆ ।
ದೊರೆಗಳ ಶಿರೋರತ್ನ, ಸುಗುಣ ಮೋಹನ್ನಾ— ‖ ೨೭ ‖

ಧಾರುಣಿಯೊಳಿದಿರಾರು ನಿನಗೇ—

ರಣಭೈರವನ ಸೀಮೆ ಗುರವಣಿಸಿ । ಜಗದಲಿರಣಭೀತಿಗೊಳಿಸಿ । ಮಿಗೆ । ರಣಕೆ ಮಾರಾಂತವರ ಹಣಿಸಿ[1] । ರಣ ಭೂತಗಳ ಕುಣಿಸಿ, ದಣಿಸಿದೆಯೋ ರಣಶೂರ ॥ ರಣಕೆ ಮಾರ್ಮಲೆತು, ಸೌರಣಿಯಾದ। ಹೊಸವೂರ । ಕ್ಷಣಕ್ಷಣಕೆ ಮರ್ನೆಗಳ ಬೆಳಸಿ, । ಭಯುಗೊಳಿಸಿ । ಮನೆ ರಣಕೆ ಮುಖವಾಗಿ ॥ ಸೆಣಸಲು ಧೂಳಿಕೋಂಟೆಯುನು । ಕ್ಷಣಮಾತ್ರದಲಿ ಕೈಕೊಂಡೆ। ಭಳಿರೆ। ರಣವಿಜಯ–ರಣಧನಂಜಯ । ರಣಹಮ್ಮಿರಾ ॥ ॥ ೨೮ ॥

ಧಾರುಣಿಯೊಳಿದಿರಾರು ನಿನಗೇ—

ಮನವಳುಕಿ ರಣಭೈರವನು ಬಂದು । ಮರೆಹೊಗಲು । ಅನುವಿತ್ತು ಮನ್ನಿಸಿ, ಅಭಯವಿತ್ತು । ಅಕ್ಷಣದಿ । ಧನಕನಕ, ಗಜ, ರಥವೆನಿಪ । ಮದ್ದಾನೆಯನು । ವಿನಯದಿಂರಾಯರಿಗೆ ಕೊಡಿಸೀ ॥ ವಿನಯದಿಂ ಕುಂದುರಿಪೆ ತಿಮ್ಮೇಂದ್ರನನು । ರಾಯ । ರನುಕಾಣಿಸಿಯೆ ರಾಜ್ಯವನು ಬಿಡಿಸಿ। ಕರಿತುರಗ । ವನು ಬಿಡಿಸಿ, ಸಂತಸ ಘನ ಕುಮಾರಸ್ವಾಮಿ। ಯೆನಿಪ, ಮದಗಜನ, ತೆಕ್ಕೊಂಡೆ, ಭಾಪು । ಮೊನೆಗಾರನಹುದೋ, ಯಿಮ್ಮಡಿ ಕೆಂಪರಾಯಾ— ॥ ೨೯ ॥

ಧಾರುಣಿಯೊಳಿದಿರಾರು ನಿನಗೇ—

ಧರೆಗಧಿಕವಾದ ದಕ್ಷಿಣಕಾಶಿ । ಕಕೋದ್ಗಿರಿಯ । ವರ ಗಂಗಾಧರನ ಪಡಿತರಕೆ । ಮುನ್ನಲಿಸಲುವ । ತಿರುಮಣಿಯುಗ್ರಾಮ ಪೋಗಿರಲಾಗಿ । ರಾಯರಿಗೆ । ಹರುಷದಿಂ ತಿಳುಹಿ ಬಿನ್ನೈಸಿ॥ ಸರಸದಿಂದಲಿ ಗ್ರಾಮವನು ತಿರುಗಿಸಿಯೇ । ಕೊಡಿಸಿ । ಸ್ಥಿರವಾದ ದಾನ ಪಟ್ಟೆಯ ಬರೆಸಿ. ವೊಪ್ಪ ವಿಟ್ಟೊರಿಸಿ। [ನೆ] ರೆ ಧರ್ಮಕೀರ್ತಿಯನು ಪಡೆದೆಯೋ । ಪುಣ್ಯ । ನಿರುಪಮ ಸುಚಾರಿತ್ರ ನಿಮ್ಮಾ। ಘನ । ದರಸುತನಕೆಣೆಯೆ, ಪ್ರಭೂತಲ ಶಿರೋಮಣಿಯೆ— ॥ ೩೦ ॥

ಧಾರುಣಿಯೊಳಿದಿರಾರುನಿನಗೇ—

ದೊರೆ, ವಜೀರರ ಕೈಯ್ಯ ಕಪ್ಪಗಳ ತೆರಿಸಿ। ರಾಜ್ಯವ ಬಿಡಿಸಿ ಠಾಣ್ಯಗಳೊಳಹುದೆಂದೆನಿಸಿ । ನರ ಪತಿಯ ಸಿಂಹಾಸನವ ನಿಲಿಸಿ । ದುದಕೆರಾ । ಯರು ಮೆಚ್ಚಿಮನಕರಿಸಿ ಸಂತೈಸಿ॥ ಕರದು ಸ್ವಾಮಿದ್ರೋಹರಗಂಡಾ। ನೀನಹುದೆಂದು । ಬಿರುದಾದ ಕಾಲಪೆಂಡೆಯ ತಾಲಿ । ಚೌಕುಳಿಯ । ಗುರುತಿನೊಡನೆಯು

[1] ಹಣಿದು

ಕಡಗ ಕಂಠಮಾಲೆಯ ಸರವ, ನವರತ್ನ ಭೂಷಣಾಂಬರವಾ॥ ಕೊಟ್ಟು ಹರುಷದಲಿರಾಯರು ಸಂತೈಸಿದ ವಜೀರಾ— ॥ ೩೧ ॥

ಧಾರುಣಿಯೊಳಿದಿರಾರು ನಿನಗೇ—

ಗುರಿತಾರಿ, ನೀಲಕಂಠನು, ಸೋಮಲಿಂಗ, । ಗಂಗಾಧರನೆಂಬ । ಬಿರುದುಳ್ಳ ಮದಕರಿಗಳಶ್ವವನು॥ ಸರಸದಲಿ, ತಾಳಿ, ಚೌಕುಳಿ ಕಂಠ । ಮಾಲೆಗಳು । ಕರಿ, ತುರಗವುಡುಗೊರೆಗಳನು, ಕೊಡಿಸಿ ಮನ್ನಿಸಿಯೆ॥ ಸರಿಯಾರು ನಿನಗೆಂದು, ಧರಣಿಪಾಲರುಯಲ್ಲ । ನೆರೆವೀರ ವಜೀರನೆಂಬುವೆಂಡೆಯಬಂದ । ಮೆರೆವ ದಿಗ್ವಿಜಯ ಅರಿರಾಯ ಭೇರುಂಡನೆಂಬ । ಅಶ್ವವಹತ್ತಿ । [1]ಮೆರೆದೆ ರಣಶೂರ ಹಮ್ಮೀರ, ಕೆಂಪರಾಯ ವೀರಾ— ॥ ೩೨ ॥

ಧಾರುಣಿಯೊಳಿದಿರಾರು ನಿನಗೆ—

ಚತ್ರಿ, ಚಾಮರ, ಬಿರುದು ವತ್ತಿನಲಿ । ಪಾಠಕರು । ದುಸ್ತಾಗಿ ಸಿಂಗರಿಸಿ, ಅರ್ತಿಯೊಳು । ಕಾಲಾಳು । ಮೊತ್ತ, ಗಜ, ತುರಗಗಳು ಅರ್ತಿಯಿಂದಲಿ ವಾದ್ಯಮೊಳಗೇ॥ ವರದಿವ್ಯರವಿ ತೇಜದಂತೆ । ನೀ ಬರುತಿರಲು । ಭರದಿಂದ ದಳವಾಯಿ ತಮ್ಮಾ । ಧೀರನು ನಿಮ್ಮ । ಚರಣಕ್ಕೆ ಶರಣೆಂದು ಬಲ್ಲಾಳ । ಪುರತನಕ ಚಿತ್ತೈಸಿ ಯೆಂದೂ । ನೀನು । ಕರಕೊಂಡು ಬಂದು ವಿಭವದಲಿದಿಗೊಂಡೇ ॥ ೩೩ ॥

ಧಾರುಣಿಯೊಳಿದಿರಾರು ನಿನಗೇ—

ಗುರಿತು ಗುರಿತಾದ ಭೂಷಣ ಪದಕುಗಳು । ಚೌಕುಳಿಯು। ಪರಿಪರಿಯ ಪಟ್ಟೆಪಟ್ಟಾವಳಿಗಳು । ಉಡುಗೊರೆಯು । ಹರುಷದಿಂ ದಳವಾಯಿತಂದು । ಭೂವರ ಕೊಟ್ಟು । ಮರೆಹೊಗಲು ನಂಬುಗೆಯನಿತ್ತೂ ॥ ತೆರಳಿ ಕಾಕೊಳಲ ಕೆರೆಯಲ್ಲಿ । ಪಾಳೆಯುವಿಳಿದು । ದೊರೆ ಮನ್ನೆಯರಿಗೆ ವುಡುಗೊರೆ ವುಚಿತಗಳನಿತ್ತೂ ॥ ನೆರೆ ಜಾಣ ತನದಿ ಕಳುಹಿಸಿದೆ ಸಂತಸದಿಂದಾ । ಪರಿವಾರ ಪಾಯ ದಳಸಹಿತ ಬಂದೇ— ॥ ೩೪ ॥

ಧಾರುಣಿಯೊಳಿದಿರಾರು ನಿನಗೇ—

---

[1] ನೆಂಬ ಬಾಷ್ಪವ ಹತ್ತಿ

ವರ ಬೆಂಗಳೂರ ಪಟ್ಟಣಕೆ ನಡೆತರಲು । ದಿಗ್ವಿಜಯದಿಂ । ದೈರಾವತವ ನೇರಿ । ದರಸು ದೇವೇಂದ್ರ ನಂದದಲೀ ಬರಲು । ಪುರವ ನೆಲ್ಲವನು ಶೃಂಗರಿಸಿ ಪರಿಜನರು ಸಹ । ತರುಣಿಯರು ಮಂಗಳಾರತಿಯೆತ್ತಿ । ಪರಸುತಿರೆ ಸರಸ ದಿಂದ । ಮನೆಗೆ ನಡೆದೆ, ವೈಭವದಿಂದ । ಪರಮೇಶ್ವರನ ಕರುಣದಿಂದ । ಕೆಂಪ ದೊರೆರಾಯ ಬಾಳು ಸಾಮ್ರಾಜ್ಯ ಪದವಿಯಲೀ— ॥ ೩೫ ॥

ಧಾರುಣಿಯೊಳಿದಿರಾರು ನಿನಗೇ—

ಸುರನಗರಿಗೆಣೆಯೆ ಅರಮನೆಯ । ಸಂಭ್ರಮದ । ಸಿರಿಯನೇನೆಂದು ಭಣ್ಣಿಸಬಹುದು । ಸಕಲ ಶುಭ । ಕರದಲ್ಲಿ, ನಚ್ಚು[1]ತಿಹ ಪರಿಪರಿಯ । ನವ ರತ್ನ । ವರಮಣಿಮಯದ ದೀಪ್ತಿಯಿಂದಾ ॥ ಥರಥರದಿ ಕುವರಿಯರು ರಾಣಿ ವಾಸಗಳೆಲ್ಲಾ । ಹರುಷದಲಿ ಮುತ್ತು ನವರತ್ನ ದಾರತಿಯೆತ್ತಿ । ಹರಸುತಿರೆ ಮಾಂಗಲ್ಯರಭಸದಿಂದೆ । ಅರಮನೆಗೆ । ದೊರೆಯಿಮ್ಮಡಿ ಕೆಂಪರಾಯ ಬಂದೆ । ಭಳಿರೆ । ಸ್ಥಿರವಾಗಿ ದೈವ ಪಟ್ಟದಲಿ ನೀಬಾಳೋ— ॥ ೩೬ ॥

ಧಾರುಣಿಯೊಳಿದಿರಾರು ನಿನಗೇ—

ಧರೆಯೊಳೆಲಹ[ಂ] ಕದನಾಡ, ವರ ಶಾಸನೋದ್ಧಾರಾ। ವರ ಕಕೋದ್ಗಿರಿ ಗಂಗೇಶನ ಭಕ್ತ ಮಂದಾರಾ । ಹರುಷದಲಿ ಹಲಸೂರವಾಸ ಸೋಮೇಶ್ವರನ । ಕರುಣದಲಿ ವರಬೆಂಗಳೂರಾ ಸ್ಥಳದಲ್ಲಿ । ಮೆರೆವ ದೊಡ್ಡ ಬಸವೇಶ್ವರನ ದಯದಿ ॥ ಗುರು ನಂಜೇಶ್ವರರ ಕೃಪೆಯನು ಸಲೆ ಪಡೆದು । ಹಿರಿಯ ಕೆಂಪ ಭೂವರನ, ಚನ್ನಾಂಬೆಯ ಕುಮಾರಾ । ನೀಬಾಳು । ಶುಭಕರದಿ ರವಿ ಚಂದ್ರರುಳ್ಳನಕಾ । ಕೆಂಪ । ಧರಣಿಪತಿ ನೀ ವಿಭೀಷಣ ಪಟ್ಟವಾಳೋ—॥೩೭॥

ಧಾರುಣಿಯೊಳಿದಿರಾರು ನಿನಗೇ—

ಧನ, ಕನಕ, ಪುತ್ರ, ಪೌತ್ರಾಭಿ ವೃದ್ಧಿಗಳಿಂದಾ । ಅನುವಾದ ಬಹು ರಾಜ್ಯ, ಆನೆಕುದುರೆಗಳಿಂದಾ । ಕನಕ ದಂಡಿಗೆ, ಪಲ್ಲಕ್ಕಿ ಛತ್ರ, ಚಾಮರ ದಿಂದಾ । ವರಬೊಕ್ಕಸ ಭಂಡಾರದಿಂದಾ ॥ ಧನಪತಿಗೆ ಸರಿಯೆನಿಪ, ನವ, ನಿಧಾನಗಳಿಂದಾ । ದಿನಕರನ ತೇಜದಿಂದೆಸದ ರಾಜಸದಿಂದಾ । ವಿನುತ ಶೈವಾಗಮ ವಿಚಾರ ತತ್ತ್ವಗಳಿಂದಾ । ಅನುವಿನಷ್ಟೈಶ್ವರ್ಯದಿಂದಾ । ಭುವನ ದೊಡೆಯ ಬಾಳು ಸಾಂಮ್ರಾಜ್ಯಪದವಿಯಲಿ ॥— ॥ ೩೮ ॥

ಧಾರುಣಿಯೊಳಿದಿರಾರು ನಿನಗೇ—

[1] ನಪ್ರುತಿಹ

ಧರಣಿ, ತರಣಿಯು, ತಾರಕಿಯು, ಚಂದ್ರರುಳ್ಳನಕಾ । ವರ ಮೇರುಗಿರಿ, ಸಪ್ತವಾರುಧಿಗಳುಳ್ಳನಕಾ । ಮೆರೆವ ನವನಿಧಿ, ಕನಕ, ರಜತಾದ್ರಿಯುಳ್ಳನಕಾ । ಸುರರು ದಿಕ್ಪಾಲರುಳ್ಳನಕಾ ॥ ಸ್ಥಿರದಿರಾಯರ ಸಿಂಹಾಸನವುಳಿಸಿದೆ । ಕೆಂಪ । ಧೊರೆರಾಯ ನಿಮ್ಮ ಚರಿತವನು । ಹರುಷದಲಿ । ಬರೆದೋದಿ ಕೇಳ್ವ ಜಾಣರಿಗೆ ಯಿಹಪರ । ಸುಖವ । ಪರಮೇಶನೀವ ಕರುಣದಲಿ । ಕೆಂಪ । ದೊರೆರಾಯ ಬಾಳು ಸಾಮ್ರಾಜ್ಯ ಪದವಿಯಲೀ— ॥ ೩೯ ॥

ಧಾರುಣಿಯೊಳಿದಿರಾರು ನಿನಗೆ–ವೀರವಿಕ್ರಮಯಿಮ್ಮಡಿ ಕೆಂಪ ದೊರೆರಾಯಾ.

॥ಅಂತು ಕೆಂಪರಾಯರ ಪದ ಸಂಪೂರ್ಣ ಮಂಗಳ ಮಹಾ ಶ್ರೀ॥



## ಇಮ್ಮಡಿ ಕೆಂಪೇಗೌಡನ

# ಕೆಂಪಾಪುರ ಅಗ್ರಹಾರದ ದಾನ-ಶಾಸನ

ಶ್ರೀಮನ್ಮಹಾ ಶ್ರೀ ಗಣಪತಯೇನಮಃ

ಸಾರ್ಧೈರ್ಕಸಂಯುಕ್ತ ಸಹಸ್ರಮಿಶ್ರ ನಕ್ಷತ್ರ ಸಂಖ್ಯಾಸು,
ಗತಾಸು, ನೂನಂ ।
ಶ್ರೀಶಾಲಿ ವಾಹಸ್ಯ ಶಕಪ್ರಮಾಣೇ, ದದೌ, ದ್ವಿಜೇಭ್ಯಃ
ಪ್ರಭುರಗ್ರಹಾರಂ ॥
ವಿಶ್ವಾವಸು, ಶರಚ್ಚೈತ್ರ ಸುಧಾಂಶು ಗ್ರಹಣೇ ತದಾ ।
ಶಾಲಿವಾಹಶಕೇ, ಸಪ್ತನೇತ್ರ ಬಾಣೇಂದು, ಸಂಖ್ಯಕೇ ॥ (೧೫೨೭)
ಗತೇಂಮಡಿಪದೋಪೇತ. ಕೆಂಪಯಾರ್ಯೋ, ಮಹಾಪ್ರಭುಃ ।
ಕೆಂಪನಾಚೇಗೌಡ, ಪೌತ್ರಃ, ಕೆಂಪೇಗೌಡಾತಥಾತ್ಮಜಃ ।
ಚತುರ್ಥಗೋತ್ರಜಸ್ಸಮ್ಯಗ್ವಿಭಾರ್ಯೈಂಮಡಿ, ಸಾಗರಂ ।
ಅಕರೋದಗ್ರಹಾರಂ, ತಂ, ಸ್ವನಾಮಕ ಪುರಸ್ಸರಂ ॥
ಸೋಮೇಶ ಸನ್ನಿಧಾವಷ್ಟ, ಚತ್ವಾರ್ಯಾತ್ಮಕ ಸಂಖ್ಯಕಾಃ ।
ವೃತ್ತಿಃ, ಪ್ರಕಲ್ಪ್ಯ, ವಿಪ್ರೇಭ್ಯೋ, ದದಾವೇಕೈಕಶಃ, ಕ್ರಮಾತ್ ॥

॥ ಅಥ ಪ್ರತಿಗ್ರಹೀತ್ರಾದಿ ವಿವರಣಂ ॥

೧ ಪಟ್ಟವರ್ಧನ ವಂಶೋಯಂ, ಲಕ್ಷ್ಮೀನಾರಾಯಣಾರ್ಯಜಃ ।
ಪ್ರತಿಗೃಹೀತವಾನ್ಸ್ಕಾಮುಕಾ ವಿಶ್ವಾಮಿತ್ರ ಗೋತ್ರಜಃ ॥
ವಿಪ್ರೋ, ಜೀವೇಶ್ವರಾಭೇದಮತಿರ್, ಬ್ರಹ್ಮವಿದುತ್ತಮಃ ॥
ತಸ್ಮಾತ್ತ್ರಿಧಾ, ವಿಭಾಗಾರ್ಹಃ- ಬಭೂವುಃ, ಶೃತಿಪಾರಗಃ ।

೨ ವಾಡಾಲವಂಶ್ಯೋ, ಶ್ರೀ ಸೋಮನಾಥ, ದೀಕ್ಷಿತ, ಸಂಜ್ಞಕಃ ।
ಸೋಯಂ, ಹರಿದಸಾಭಿಖ್ಯೋ, ಗೋತ್ರಃ ಪ್ರತಿಗೃಹೀತವಾನ್ ॥

ತಸ್ಮಾದ್ದ್ವಿಧಾವಿಭಾಗೋಪೇತಾನ್ ಬಭೂವ, ತು ರಿತೀರಿತೌ ।
ಶಾವಾವಧಾನೀ ಶ್ರೀವೆಂಕಟೇಶಾಚಾರ್ಯ ಇತಿ ಕಥ್ಯತೇ ॥
೩ ಶ್ರೀಮುತ್ತುಕೂರು ನಿಲಯ ವಿಶ್ವಾಮಿತ್ರಾನ್ವವಾಯಸೇ ।
ನಾರಣಾಚಾರ್ಯವರ್ಯಾಯ ಭುವಂ ತಸ್ಮೈ ದದೌ ಪ್ರಭುಃ ॥
ದೌಹಿತ್ರಾಯ ದದೌ ಸೋಽಯಂ ಸುಬ್ಬರಾಯಾಭಿಧಾವತೀ ॥

೪ ರಾಮಕೃಷ್ಣತನೂಜಾಯ ನೃಸಿಂಹಾಚಾರ್ಯಧೀಮತೇ ।
ಕಾಶ್ಯಪಾನ್ವಯಜಾತಾಯ ದದೌ ರಾಜಾ ಭುವಂ ಪರಂ ॥
೫ ಯಂಣ್ಯಗಂಟಕುಲೋತ್ಪಂನ ಜ್ಯೋತಿಸ್ಸಿದ್ಧಾಂತವೇದಿನೇ ।
ಗೋಪಾಲಾಖ್ಯಾಯ ಕೌಂಡಿನ್ಯಗೋತ್ರಾಯ ಚ ಭುವಂ ದದೌ ॥
ಅಂಶಸ್ವೇಕಸ್ತಸ್ಯ ಚೇತಿ ವಿಜ್ಞೇಯೋ ವೌಲ್ಯವೇ ವಿಭುಃ ॥
೬ ಯಸ್ತು ಬಾಲ್ಯೇ ಸಭಾಂ ಗತ್ವಾ ಪರೀಕ್ಷ್ಯ ನೃಪ ತೋಷಿತಃ ।

ಭಾರದ್ವಾಜಸ ಗೋತ್ರಸ್ಸ ತಿಪ್ಪಾಭಟ್ಟಾ ಗೃಹೀತವಾನ್ ॥
ದೌಹಿತ್ರಾಯ ದದೌ ಸೋಽಯಂ ಅಖಂಡ ಫಲಕಾಂಕ್ಷಯಾ ।
ವಾಡಾಲವಂಶಜಾತಾಯ ವೆಂಕಟೇಶಬುಧಾಯ ಚ ॥
೭ ವೈಕುಂಠವಂಶಸಂಭೂತ ನಾರಾಯಣ ಮನೀಷಿಣೇ ।

ಆತ್ರೇಯಸಾಖ್ಯ ಗೋತ್ರಾಯ ದದೌ ತಸ್ಮೈಭುವಂ ಪ್ರಭುಃ ॥
ಏಕಸ್ತಸ್ಯಾಂಶ ಏವಾದ್ಯಾಪ್ಯೇವಚ್ಛಿಂನ್ನ ಇತಿ ಸ್ಥಿತಃ ॥
೮ ರಾಮಾನುಜೈಕ ಭಕ್ತಾಯ ವಸಂತಾರ್ಯಾಯಧೀಮತೇ ।
ಕೌಶಿಕಾನ್ವಯ ಜಾತಾಯ ದದೌ ತಸ್ಮೈ ಮಹೀಂ ಮುದಾ ॥
ದೌಹಿತ್ರಾಯ ಸೋಽಯಂ ದದೌ ನಾರಾಯಣ ಮನೀಷಿಣೇ ।
ಏಕ ಏಕಾಂಶ ಇತ್ಯೇಷು ವಿಜ್ಞೇಯೋವಿಬುಧೈರ್ಮುದಾ ॥
೯ ಸದಾ ಹರಿಕಥಾಸಕ್ತ ದಾಸಂಭಟ್ಟಾಯ ಧೀಮತೇ ।
ವಸಿಷ್ಟತುಲ್ಯವಂಶಾಯ ದದೌ ಭೂಮಿಂ ಮಹೀಪತಿಃ ॥
ತದ್ವಂಶಜಾ ವುಭೌ, ದಾಸಪಿಠಲಾಚಾರ್ಯ ನಾಮಕೌ ।
ಭಾಗಾರ್ಹೌ ತೌ ವಿರಾಜೇತೇ ಭಗವತ್ಕೀರ್ತನಾ ಪರೌ ॥

೧೦ ಚಿಕ್ಕಂಣಭಟ್ಟವಿದುಷೀ ಕೌಶಿಕಾಖ್ಯಾನ್ವವಾಯಿನೇ ।
ದದೌಶ್ರೀರಾಮಭಕ್ತಾಯ ದದೌ ಭೂಮಿಮಾ ಮಹಾಪ್ರಭುಃ ॥
ವಿಕ್ರಯ್ಯ ದತ್ತವರ್ಾ ಸೊಽಯಂ ಚಿಕ್ಕಣಾಖ್ಯ ಸ್ಯಸಂಮತಾತ್ ।
ನಂಜುಂಡಭಟ್ಟವಿದುಷೇ ನಾರಾಯಣ ಬುಧಾಯ ಚ ॥
ಭಾಸ್ಕರಾಖ್ಯಾಯ ವಿದುಷೇ ವೆಂಕಟೇಶ ಬುಧಾಯ ಚ ।
ಏತೇಭ್ಯಶ್ಚ ಕ್ರಯಂ ಕೃತ್ವಾ ದದೌ ಭೂಮಿಂ ಸಮಾಂಶತಃ ॥

೧೧ ಯೇದಟ್ಲವಂಶ ಸಂಜಾತ ಸೂರಿಭಟ್ಟಾಯ ಧೀಮತೆ ।
ತತ್ಕೌಂಡಿನ್ಯಸ ಗೋತ್ರಾಯ ದದೌ ಭೂಮಿಂ ಮಹಾಪ್ರಭುಃ ॥
ಏಕಸ್ತಸ್ಯ ಇತಿಜ್ಞೇಯೋಽಪ್ಯರಚ್ಛಿಂನ ತಯಾಸ್ಥಿತಃ ॥

೧೨ ಭಾರದ್ವಾಜಸಗೋತ್ರಾಯ ದಿವಾಕರ ಮನೀಷಿಣೇ ।
ಪಂಡಿತಾಯ ದದೌ ಭೂಮಿಂ ಪ್ರಭುಸ್ವಾಶ್ರಯ ಪೋಷಕಂ ॥
ತಸ್ಮಾದ್ದ್ವಿಧಾವಿಭಾಗಾರ್ಹೌ ಜಾತಾ ನಯವಿಶಾರದೌ ।
ಅಕ್ಕಾಭಿದೋ ತಥಾ ನಂಜನಾಮಾ ಹಿ ಪರಿಚಕ್ಷತೇ ॥

೧೩ ಕೌಂಡಿನ್ಯ ಸಾನ್ವವಾಯೋ ವೆಂಕಟನಾರಾಯಣಾಭಿಧಃ ।
ಪ್ರತಿಗೃಹೀತವರ್ಾ ಸೋಽಯಂ ಮರ್ಧಂ ಶಿಷ್ಟಾತ್ಮನಾ ತದಾ ॥
ತದ್ವಂಶಜಸ್ತಥಾ ರಾಮಭಟ್ಟ ಇತ್ಯಭಿಧೀಯತೇ ।
ಹರಿಪಾದಾಬ್ಜ ದತ್ತೈಕ ಚಿತ್ತವೃತ್ತಿರ್ಮಹಾ ಮತಿಃ ॥
ಅತದ್ವಂಶ್ಯೋಽಪಿ ತದ್ವಂಶ್ಯ ಇತಿಲೋಕೈಃ ಪ್ರಕೀರ್ತಿತಃ ॥

೧೪ ತಸ್ಮೈ ಚ ಚಾಮಳದಿಂನಾಖ್ಯ ವಂಶಜಾತಾಯ ಧೀಮತೇ ।
ವಸಿಷ್ಟಸಂನ್ನಿಭಾಯ ಶ್ರೀ ಕೃಷ್ಣಭಟ್ಟಾಯ ಧೀಮತೇ ॥
ಅರ್ಧವೃತ್ತಿಂ ದದೌ ರಾಜಾ ಪ್ಯವಶಿಷ್ಟತಯಾ ತದಾ ।
ಅನಪತ್ಯತಯಾ ಸೋಽಯಂ ದೌಹಿತ್ರಾಯ ದದೌ ಮುದಾ ॥
ನಾರಾಯಣಾಖ್ಯವಿದುಷೇ ವೃತಗಿರ್ಯನ್ವವಾಯಿನೇ ।
ಕೌಂಡಿನ್ಯಸಾಖ್ಯಗೋತ್ರಾಯ ತಂತ್ರಪಾರಂಗತಾಯ ಚ ॥

೧೫ ನರಲಾನ್ವಯ ಜಾತಾಯ ಈಶ್ವರಾಖ್ಯ ಮನೀಸಿಣೇ ।
ವಿಶ್ವಾಮಿತ್ರ ಸದೃಕ್ಷಾಯ ದದೌ ರಾಜಾ ಮಹೀಂ ಮುದಾ ॥

ತದ್ವಂಶಜೋ ನಂತಸಂಜ್ಞಃ ಭಾಗಾ ಹ್ರ್ಯೆಕಪ್ರವರ್ಧಿತಃ ।
ತತಸ್ಯೋಽಪ್ಯನಪತ್ಯತ್ವಾದ್ದೌಹಿತ್ರಾಯ ದದೌ ಮಹೀಂ ॥
ಸೂಗೂರಿ ನರಸಿಂಹಾಖ್ಯಭಟ್ಟಾಯ ಚ ಮನೀಷಯಾ ।
ಹರಿಪಾದಾಬ್ಜ ದತ್ತೈಕಚಿತ್ತಾಯ ಚ ಮಹಾಮತೇಃ ॥
ಭಾರಧ್ವಾಜಸ ಗೋತ್ರಾಯ ಭಗವದ್ಭಕ್ತಿ ಶೋಭಿನೇ ।
ತತಸ್ಸೋಽಪಿ ದದೌ ಭೂಮಿಂ ದೌಹಿತ್ರಾಯ ಮನೀಷಿಣೇ ॥
ಭಗವದ್ದತ್ತಚಿತ್ತಾಯ ನಾರಾಯಣ ಬುಧಾಯ ಚ ।
ವೆಲ್ಪನೂರು ಕುಲೋತ್ಪನ್ನ ಶ್ರೀವತ್ಸಾಖ್ಯ ಸುಗೋತ್ರಿಣೇ ॥
ವೆಂಕಟಾಖ್ಯಾಯ ವಿದುಷೇ ದದೌ ಶ್ರೀಸೋಮಯಾಜಿನೇ ।
ತತ್ಕುಲೀನಸ್ತ್ವೇಕ ಏವ ಭಾಗಾರ್ಹಃ ಪರಿಚಕ್ಷತೇ ॥

೧೬ ಶ್ರೀ ಬೊಂದಿನೀದಿಂನಜಾತ ಶೃಂಗೇರೀವಾಸ ಶೋಭಿನೇ ।
ಕೌಂಡಿನ್ಯ ಗೋತ್ರಿಣೇ ತಸ್ಮೈ ವೆಂಕಟಾಭಿಧ ಶಾಸ್ತ್ರಿಣೇ ॥
ದದೌ ಭುವಂ ಮಹಾರಾಜಾ ತಸ್ಯ ತ್ವೇಕಾಂಶ ಈರಿತಃ ॥

೧೭ ಕೌಂಡಿನ್ಯಸಾಖ್ಯಗೋತ್ರಾಯ ಶ್ರೀಕಲ್ಲುಮಠ ಗೋತ್ರಿಣೇ ।
ನೃಸಿಂಹಾಚಾರ್ಯನಾಮ್ನೇ ತು ದದೌ ತಸ್ಮೈ ಭುವಂ ಪ್ರಭುಃ ॥
ತದ್ಭಾಗಾರ್ಹಸ್ತ್ವೈಕ ಏವ ಕರಿಗಿರ್ಯಭಿಧೋ ಮತಃ ॥

೧೮ ದುದ್ದ್ಯಾಲ ರಾಮಂಭಟ್ಟಾಯ ಕೌಂಡಿನ್ಯಾಖ್ಯಾನ್ವವಾಯಿನೇ ।
ತಸ್ಮೈ ಶ್ರೀರಾಮಭಕ್ತಾಯ ದದೌ ರಾಜಾ ಭುವಂ ಮುದಾ ॥
ಸೋಽಪಿ ವಾಬಂಣ ನಾಮ್ನೇ ಚ ವಿಕ್ರಯ್ಯೇಮಾಂ ಮಹೀಂ ದದೌ ॥

೧೯ ಪುಲಿವಿಂದಲ ಸಂಭೂತ ಕೌಂಡಿನ್ಯಾಖ್ಯಾನ್ವವಾಯಿನೇ ।
ದದೌ ವೆಂಕಟಭಟ್ಟಾಯ ದಯಾವಾರ್ಧಿ ಧರಣೀಂ ಪ್ರಭುಃ ॥
ವಾದಾರ್ಥ ದಾನನಿಪುಣ ನಿವರ್ತಿತ ಭುವೇ ಬಲಾತ್ ।
ಅಂಶಸ್ತ್ವೈಕ ಇತಿ ಪ್ರೋಕ್ತಸ್ಸಿದ್ಧಶ್ವೇಶ್ವರಭಕ್ತಕಃ ॥

೨೦ ಧರ್ಮಾಭಟ್ಟಾಯ ವಿದುಷೇ ಕೌಶಿಕಾಖ್ಯಾನ್ವವಾಯಿನೇ ।
ಮಹೀಂ ದದೌ ಸ ಮಹತೇ ಮಹಾಧರ್ಮಪರಾಯಣಃ ॥

ದೌಹಿತ್ರಾಯ ದದೌ ಸೋಽಯಂ ಭಾರದ್ವಾಜ ಸ ಗೋತ್ರಿಣೇ ।
ರಾಮಭಟ್ಟಾಯ ಸೌಮ್ಯಾಯ ತ್ರಿಧಾಭಾಗಾರ್ಹ ಸ್ಯತ್ರಿಣೇ ॥
ರಾಮಾಭಟ್ಟಸ್ತಥಾ ನೀಲಕಂಠಭಟ್ಟಸ್ತಥೈವ ಚ ।
ಸದಾಶಿವ ಇತಿಸುತಾ ವೃಷಾರ್ಥ ಪರಿಹಾರಿಣಃ ॥

೨೧ ಚೇಪೂರುನಿಲಯ ಶ್ರೀವರ್ಮಾ ವಿದ್ಯಾಬ್ಧಿಂ ಗರಿದೀಕ್ಷಿತಃ ।
ಪ್ರತಿಗ್ರಹೀತವರ್ಮಾ ಭೂಮಿಂ ಭಾರದ್ವಾಜಸ ಗೋತ್ರಜಃ ॥
ತತ್ಸುತಾಶ್ಚ ತ್ರಯೋಜಾತಾ ಭಾಗಾರ್ಹಶ್ಶೃತಿಪಾರಗಾಃ ।
ಶ್ಯಾಮಾವಧಾನೀತಿ ತಥಾ ಗಂಗಾಧರ ಇತಿ ಸ್ಮೃತಃ ॥
ಶೀಬೀನೃಸಿಂಹ ಭಟ್ಟಶ್ಚೇತ್ಯೇವಂ ಪುತ್ರಾ ತ್ರಯಸ್ಮೃತಾಃ ॥

೨೨ ಶ್ರೀ ಚಂನರಾಯಾಚಾರ್ಯಾಯ ವೈಖಾನಸಕುಲಾಯ ಚ ।
ಗೌತಮಾನ್ವಯ ಜಾತಾಯ ದದೌ ಭೂಮಿಂ ಮಹಾಪ್ರಭುಃ ॥
ಭಾಗಸ್ತ್ವೈಕ ಇತಿಪ್ರೋಕ್ತಃ ತಸ್ಯೇತಿ ಚ, ಸುನಿಶ್ಚಿತಃ ॥

೨೩ ವನಾಭಿಧಂ ಪುರಂ ಯಸ್ಯ ಗೋತ್ರಂ ಲೋಹಿಂತ ಸಂಜ್ಞಿಕಂ ।
ಅಹೋಬಲಾಖ್ಯ ಭಟ್ಟಾಯ ದದೌ ತಸ್ಮೈ ಭುವಂ ಪ್ರಭುಃ ॥
ಚತ್ವಾರೋ ವಂಶಜಾಸ್ತಸ್ಯ ಭಾಗಾರ್ಹಃ ಕಥಿತಾ ಪರಂ ।
ನೃಸಿಂಹಭಟ್ಟ ಇ [ವ] ಚ ತಥಾ ತಿಂಮಂಣಭಟ್ಟಕಃ ॥
ಸುಬ್ಬಾಭಟ್ಟಸ್ತುರೀಯಶ್ಚಾ ಪ್ಯಹೋಬಲ ಇತೀರಿತಃ ॥

೨೪ ಶ್ರೀಬುರನರಸಿಂಹಾಖ್ಯಶಾಸ್ತ್ರಿಣೇ ತಂತ್ರವೇದಿನೇ ।
ಶ್ರೀವತ್ಸಗೊತ್ರ ಜಾತಾಯ ದದೌ ಭೂಮಿಂ ಮಹಾಪ್ರಭುಃ ॥
ಅಂಶಸ್ತ್ವೇಕಸ್ತಸ್ಯ ಚೇತಿ ಪಾರಂಪರ್ಯಾತ್ಪ್ರವರ್ತತೇ ॥

೨೫ ಅಥ ಸಖರವಂಶಸ್ಥ ವೆಂಕಟಾಖ್ಯ ಮನೀಷಿಣೇ ।
ಭಾರದ್ವಾಜಸಗೋತ್ರಾಯ ದದೌ ತಸ್ಮೈ ಭುವಂ ಪ್ರಭುಃ ॥
ತತ್ಪೌತ್ರಸ್ತಾದೃಶಾಭಿಖ್ಯೋ ವಿಕ್ರಯ್ಯ ಸ್ವಮನೀಷಯಾ ।
ಮುನಿಪಲ್ಯ ಸಮುದ್ಭೂತ ತಿಪ್ಪಾಭಟ್ಟಾಯ ಧೀಮತೇ ॥
ದದೌ ಸ್ವಭೂಮಿಂ ಕೃಪಯಾ ಧನ್ಯೈಕಾಯತ್ತ ಮಾನಸಃ ॥

೨೬ ಕುಂಪಂಣಾಚಾರ್ಯವರ್ಯಾಯ ಕಾಶಿಕಾಖ್ಯಾನ್ವವಾಯನೇ ।
ತಥಾ ಪ್ರಸಿದ್ಧವಂಶಾಯ ಕೃಷ್ಣಾರ್ಪಿತಧನಾಯ ಚ ॥
ದದೌ ಭುವಂ ಮಹಾರಾಜಾ ದಾನಪಾಕಲಿತಾಯ ಚ ॥

೨೭ ಕೌಂಡಿನ್ಯಗೋತ್ರಸಂಭೂತ ಬಾಲಕುಂಟ್ಲ ನಿವಾಸಿನೇ ।
ದದೌ ಶ್ರೀ ತಿರುಮಲಾಖ್ಯ ಶಾಸ್ತ್ರಿಣೇ ಚ ಭುವಂ ಪ್ರಭುಃ ॥
ಮೇಘಪ್ರಸ್ತರ ಸಂಜಾತ "ದ್ವಿಜಂ ಕರ್ನಾಟಕಭಾಷಯಾ" ।
ವಿನಿರ್ಜಿತ್ಯ ಮಹೀಂ ಪ್ರಾಪ್ಯ ರೇಜೇಯಸ್ತ್ವ ಬಲಾಬಲಃ ॥
ಭಾಗಾರ್ಹಸ್ತ್ವೇಕ ಇತಿ ಚ ಸ್ಮೃತಃ ಪೂರ್ವಾನುಸಾರತಃ ॥

೨೮ ಚಿನುಕೋಟಲ ಸಂಜಾತ ವೆಂಕಟಾಖ್ಯಾವಧಾನಿನೇ ।
ಶ್ರೀವತ್ಸಗೋತ್ರಿಣೇ ತಸ್ಮೈ ದದೌ ರಾಜಾ ಭುವಂ ಮುದಾ ॥
ವಿಭಾಗಾರ್ಹೌ ಸುತಾ ಜಾತಾ ಶ್ರೀ ವೇಂಕಟಗಿ [ರಿ] ಸ್ಮೃತಃ ।
ತಥಾ ವೆಂಕಟ ನಾರಾಯಣಾಭಿಖ್ಯ ವಿಬುಧಸ್ಮೃತಃ ॥

೨೯ ಪಾಳ್ಯಾಖ್ಯ ನಿಲಯ ಶ್ರೀಮದ್ಗಂಗಾಧರ ಮನೀಷಿಣೇ ।
ತಥಾ ಗೌತಮಗೋತ್ರಾಯ ದದೌ ರಾಜಾ ಭುವಂ ಮುದಾ ॥
ತದ್ವಂಶಜಸ್ಸುಬ್ಬರಾಯಜ್ಞೋಶ್ಯ ಇತ್ಯಭಿಧೀಯತೇ ।
ಏಕೋ ಜೀವಾಭೇದಮತಿಸ್ಸಿದ್ಧಾಂತಗೋಚರಃ [ಸ್ಮೃತಃ] ॥

೩೦ ನೇರ್ಯನೂರು ಸ್ಥಿತ ಶ್ರೀಮದ್ವೆಂಕಟೇಶ ಮನೀಷಿಣೇ ।
ತಥಾ ಹರಿದಸಾಭಿಖ್ಯ ಗೋತ್ರಿಣೇ ಚ ಭುವಂ ದದೌ ॥
ತದ್ವಂಶಜಾ ವುಭಾವಾಸ್ತಾಂ ಶಿವರಾಮಾಭಿಧಸ್ತಥಾ ।
ವೆಂಕಟೇಶಾಖ್ಯಭಟ್ಟಶ್ಚೇತ್ಯೇವಂ ವಂಶಾನುವರ್ತಿನಾ ॥

೩೧ ಶ್ರೀಕೋಟಪಲ್ಯನಿಲಯ ಶ್ರೀವತ್ಸಾಂಚಿತ ಗೋತ್ರಿಣೇ ।
ದದೌ ಶ್ರೀಕೃಷ್ಣಭಟ್ಟಾಯ ಭುವಂ ರಾಜಾ ದಯಾನ್ವಿತಃ ॥
ತದ್ವಂಶಜಾಸ್ತ್ರಿಭಾಗಾರ್ಹಃ ಸದಾಶಿವ ಪುರೋಗಮಾಃ ॥

೩೨ ನವ್ಯಮಂಕಾಲ ಸಂಜಾತ ರಾಮಾಭಟ್ಟಾಭಿಧಾವತೇ ।
ಅಥ ಕೌಶಿಕ ಗೋತ್ರಾಯ ದದೌ ರಾಜಾ ಭುವಂ ಮುದಾ ॥

ಅಂಶಸ್ತ್ವೇಕಸ್ತಸ್ಯ ಚೇತಿ ರಾಮಾಭಟ್ಟೋಹಿ ವಂಶಜಃ ||

೩೩ ನಾಗಾವರ್ಝಲ ಶ್ರೀವೆಂಕಟಭಟ್ಟಾ [ಯ] ಬುಧಾಯ ಚ |
ಶ್ರೀವತ್ಸಗೋತ್ರಿಣೇ ತಸ್ಮೈ ಭುಹಂ ರಾಜಾ ದಯಾನ್ವಿತಃ ||
ಹರಿಪಾದಾಬ್ಜ ದತ್ತೈಕಚಿತ್ತೋ ದ್ರವ್ಯಪ್ರವರ್ಧಿತಃ |
ಶ್ಯಾಮಾವಧಾನೀತಿ ಬುಧೈಃ ಕೀರ್ತಿತಸ್ತತ್ಸುತಶ್ಚ ಸಃ ||

೩೪ ಅನ್ನದಾನ ಕುಲಸ್ಥಾಯಾ ಪ್ಯಕ್ಕಾಭಿಧ ಬುಧಾಯ ಚ |
ಅಘಮರ್ಷಣ ವಿಶ್ವಾಮಿತ್ರಾನ್ವಯಾಯಾ [ಚ] ಸೂರಿಣೇ ||
ತದಂನ್ವಯಾಯೀ ಶ್ರೀ ಲಕ್ಷ್ಮಣಾಭಿಖ್ಯೋಕೃಪಯಾಪರಂ |
ಶ್ರೀವತ್ಸಗೋತ್ರಿಣೇ ತಸ್ಮೈ ಸುಬ್ಬಾಭಟ್ಟಾಭಿಧಾಯ ಚ ||
ದಾನಂ ಚಕಾರ ಸೋಪ್ಯರ್ಥಂ ಧರ್ಮೈಕಾಯತ್ತಮಾನಸಃ ||

೩೫ ಆಕುಮಾಳ ಸಮುದ್ಭೂತ ವೆಂಕಟೇಶ ಬುಧಾಯ ಚ |
ವಾಧೂಳಸಾಖ್ಯಗೋತ್ರಾಯ ದದೌ ಭೂಮಿಂ ಮಹಾಪ್ರಭುಃ ||

೩೬ ದಿಗ್ಗೋಲಾನ್ವಯ ಜಾತಾಯ ಶ್ರೀಮತ್ತೊಂಡಾವಧಾನಿನೇ |
ಆತ್ರೇಯ ಸಾಖ್ಯಗೋತ್ರಾಯ ದದೌ ಭೂಮಿಂ ಮಹೀಪತಿಃ ||
ತದ್ವಂಶಯಾಯೀ ಪೌತ್ರತ್ವೇ ಲಕ್ಷ್ಮಣಾಖ್ಯೋ ಬಭೂವಸಃ |

೩೭ ಹೊಂನಿ ಭಟ್ಟಾಖ್ಯ ವಿದುಷೇ ಶ್ರೀಮದ್ಧರಿತ (ಸ) ಗೋತ್ರಿಣೇ |
ಮಹೀಂ ದದೌ ಮಹಾರಾಜಾ ಮಹಾ ಮಹಿಮ ತೇಜಸೇ ||
ತದ್ವಂಶ ಪಾರಂಪರ್ಯಾಚ್ಚ ವಿವರ್ಧಿತ ಹರಿಸ್ಮೃತಿ |
ಆಗೋಪಾಲೇ ತು ಪರ್ಯಾಪ್ತಾಹ್ಯಂಶಸ್ವೇಕ ಇತೀರಿತಃ ||

೩೮ ಸಂಪಿಗಾನ್ವಯಜ ಶ್ರೀವೆಂಕಟರಾಮಾಭಿಧಾಯ ಚ |
ಆಚಾರ್ಯಾಯ ದದೌ ಭೂಮಿಂ ಕೌಂಡಿನ್ಯಸಗೋತ್ರಿಣೇ ||
ತತ್ತನೂಜಸ್ತಥಾಭಿಖ್ಯ ಅಂಶಸ್ತ್ವೇಕ ಇತೀರಿತಃ |
ಹರಿಪಾದಾಬ್ಜ ದತ್ತೈಕ ಚಿತ್ತೋ ಧರ್ಮಪರಾಯಣಃ ||

೩೯ ನೈಷಧಾನ್ವಯ ಜಾತ ಶ್ರೀ ವೆಂಕಟಾದ್ರಿ ಬುಧಾಯ ಚ |
ಶಾಲಾವತ್ಸಸ ಗೋತ್ರಾಯ ದದೌ ಭೂಮಿಂ ಮಹಾಪ್ರಭುಃ ||

ಪಾದಭಾಗಂ ತಥಾ ಸೋಽಯಂ ತಿಪ್ಪಾಭಟ್ಟಾಯ ಧೀಮತೇ ।
ಮುನಿ ಪಲ್ಯಾಖ್ಯ ವಂಶ್ಯಾಯ ಚಕ್ರೇ ದಾನಂ ದಯಾಪರಃ ॥
ಅಂಶಸ್ತ್ವೇಕ ಇತಿ ಪ್ರೋಕ್ತೋ ಪಾರಂಪರ್ಯಾನುವರ್ತಕಃ ॥
೪೦ ಮುನಿಪಲ್ಯಾಖ್ಯವಂಶೇ ತು ಜಾತಶ್ಚಾಕ್ಷಾವಧಾನಿಕಃ ।
ಸೋಽಯಂ ಹರಿದಸಾಭಿಖ್ಯಗೋತ್ರಃ ಪ್ರತಿಗ್ರಹೀತವಾನ್ ॥
ತದಂಶಾರ್ಹೌ ದ್ವಿಧಾ ಜಾತೌ ನಪ್ತಾ ನಂಜುಂಡ ಭಟ್ಟಕಃ ।
ಸೀತಾರಾಮಾಭಿಧಶ್ಚೇತಿ ತತ್ಕುಲೇ ಸಂಭವಾ ವುಭೌ ॥
೪೧ ಲಕ್ಷ್ಮೀನೃಸಿಂಹಭಟ್ಟಶ್ಚ ವಸಿಷ್ಠಸದೃಶಾನ್ವಯಃ ।
ಪ್ರತಿಗ್ರಹೀತವಾನ್ ಸೋಽಯಂ ಮಹೀಂ ರಾಜ್ಞಃ ಪ್ರಸಾದತಃ ॥
ತದ್ವಂಶಜೌ ವುಭಾವಾಸ್ತಾಂ ಕೃಷ್ಣಶ್ಚಾಥ ನೃಸಿಂಹಕಃ ॥
೪೨ ಕಾಕರ್ಲ ಕುಲಜಿ ಶ್ರೀ ವೆಂಕಟನಾಮ ಬುಧಾಯ ಚ ।
ದೇವರಾತ ಸ ಗೋತ್ರಾಯ ತಸ್ಮೈ ರಾಜಾ ಭುವಂ ದದೌ ॥
ತತಸ್ತ್ರಿಧಾ ವಿಭಾಗಾ (ಹ) ಹರ್ಾ ಜಾತಾ ಶೃತಿಪರಾಯಣಾಃ ॥
೪೩ ಗೋವಿಂದ ಭ (ಟ) [ಟ್ಟ] ವಿದುಷೇ ಪ್ರಾಭಾಕರಕುಲಾಯ ಚ ।
ತಥಾ ಕೌಶಿಕ ಗೋತ್ರಾಯ ದದೌ ರಾಜಾ ಮಹೀಂ ಮುದಾ ॥
ಏಕೋ ಜೀವೇಶ್ವರಾಭೇದಮತಿರ್ಬ್ರಹ್ಮವಿದುತ್ತಮಃ ।
ಸೋಽಯಂ ಶ್ರೀವತ್ಸಗೋತ್ರಾಯ ಭೂದಾನಂ ಕೃತವಾನ್ ಮುದಾ ॥
ವಿಭೂತಿ ಶ್ಯಾಮಭಟ್ಟಾಯಾಪ್ಯೇಕಭಾಗಾರ್ಹ ಶೋಭಿನೇ ॥
೪೪ ಕೊತ್ತಪ್ಪಿ ಕೃಷ್ಣಾಚಾರ್ಯಾಯ ಮೌದ್ಗಲ್ಯಾಭಿಧ ಗೋತ್ರಿಣೇ ।
ದದೌ ಭುವಂ ಮಹಾರಾಜಃ ಧರ್ಮೈಕಾಯತ್ತ ಮಾನಸಃ ॥
ತತೋ ದ್ವಿಧಾ ವಿಭಾಗಾರ್ಹೌ ಜಾತೌ ತತ್ಕುಲ ಸಂಭವೌ ।
ನಾರಶೀದ್ಯಾವರಶ್ಚೇತಿ ಗಟ್ಯಪ್ಪ ಇತಿ ಚ, ದ್ವಿಧಾ ॥
೪೫ ವೀರೇಶನಾಮಧೇಯಾಯ ವಿಷ್ಣುಪಾದೋದ್ಭವಾಯ ಚ ।
ತುರೀಯ್ಯ ಜಾತೀಯ ಧರ್ಮವಿದೇ ರಾಜಾ ಭುವಂ ದದೌ ॥
ಅಂಶಸ್ತಥಾ ಬಭೂವೈಕಃ ತಾದೃಗ್ದೇವಾರ್ಚನಾ ಪರಃ ।

ಶ್ರೀರಂಗಪತ್ತನೇ ರಾಜ್ಞಾಮಗ್ರೇ ವಿದ್ವತ್ಸಭಾಮುಖೇ ।
ಏಡದ್ಗ್ರಾಮಬುಧೈಸ್ಸಾಕಂ ಅನುವಾದ್ಯೈಕ ವತ್ಸರಂ ॥
ನಿರ್ಜಿತ್ಯ ನಿಬಿಡಂ ತೋಷಂ ಯಃ ಪ್ರಾಪ ಸಬುಧೋ ಧ್ರುವಂ ॥

೪೬ ಸೋಮೇಶಾಯ ದದೌ ಭೂಮಿಂ ಸ್ವರ್ಲೋಕ ಫಲ ಕಾಂಕ್ಷಯಾ ।
ಸ್ವೇಷ್ಟಾರ್ಥ ಲಾಭ ಸಂತುಷ್ಟೋ ರಾಜಾ ಪರಮಧರ್ಮವಿತ್ ॥
ತದರ್ಚನಾಪರಶ್ಚಾಥ ಕಾಶ್ಯಪಾಖ್ಯಾನ್ವವಾಯಕಃ ।
ಸೋಮೇಶ ಭಟ್ಟ ಇತಿ ತತ್ಫಲಭಾಕ್ಚ ಬಭೂವ ಸಃ ॥
ತತ್ಸುತಾಶ್ಚ ತ್ರಯೋ ಜಾತಾಸ್ಸದಾಶಿವ ಪುರೋಗಮಾಃ ॥

೪೭ ಅಥ ಮಂಕಾಲ ವಂಶ್ಯಾಯ ತಥಾ ಕೌಶಿಕ ಗೋತ್ರಿಣೇ ।
ನೃಸಿಂಹನಾಮ್ನೇ ಚ ಭುವಂ ದದೌ ರಾಜಾ ಮಹಾಯಶಾಃ ॥
ತದ್ವಂಶಯಾಯೀ ಶ್ರೀವಿಷ್ಣುದತ್ತಚಿತ್ತೋ ದಯಾಪರಃ ।
ಲಕ್ಷ್ಮೀನೃಸಿಂಹ ನಾಮಾ ಹಿ ವರ್ತತೇ ಹ್ಯೇಕ ಭಾಗ ಭಾಕ್ ॥

೪೮ ಕೇಶವಾರ್ಪಿತಚಿತ್ತಾಯ ಶ್ರೀನೃಸಿಂಹ ಮನೀಷಿಣೇ ।
ತಥಾ ಕೌಶಿಕ ಗೋತ್ರಾಯ ಭುವಂ ರಾಜಾ ದದೌ ಮುದಾ ॥
ತದ್ಧನಾರ್ಹಸ್ತನೂಜನ್ಮ ಧರ್ಮತಃ ಪರಿವರ್ಧತೇ ।
ಅಚ್ಚಂಣ್ಣಭಟ್ಟ ಇತಿ ಚ ತನೂಜನ್ಮ ವಿವರ್ತವಾ್ ॥

—

ಇತ್ಯೇವ ಮಷ್ಟಚತ್ವಾರಿ ವೃತ್ತೀ ರಾಜಾದಯಾನ್ವಿತಃ ।
ಸಂವತ್ಸರ ವ್ರತಂ ಕೃತ್ವಾ ಸಂತುಷ್ಟಃ ಕೃಪಯಾದದೌ ॥

—

ಶ್ರೀ ಶ್ರೀ ಶ್ರೀ

———

## ಇಮ್ಮಡಿ ಕೆಂಪೇಗೌಡನ–ಬೆಂಗಳೂರು ಪೌರೋಹಿತ್ಯದಾನ ಶಾಸನ

ಶ್ರೀರಂಗನಾಥ ಪ್ರಸನ್ನ

ಚಂದ್ರ–ನಕಲು–ಸೂರ್ಯ

ಹರಿರ್ಲೀಲಾ ವಿಲಾಸಸ್ಯ ದಂಷ್ಟ್ರಾದಂಗಸ್ಸಪಾತುವಃ ।
ಹೇಮಾದ್ರಿ ಕಲಶಾ ಯತ್ರಧಾತ್ರೀಚ್ಛತ್ರ ಶ್ರಿಯಂ ದದೌ ॥
ನಮಸ್ತುಂಗ ಶಿರಚ್ಚುಂಬಿ ಚಂದ್ರಚಾಮರಚಾರವೇ ।
ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕೆ ವರ್ಷಂಗಳು ೧೫೮೦ನೆ ವರ್ತಮಾನವಾದ ಹೇವಿಳಂಬಿನಾಮ ಸಂವತ್ಸರದ ವೈಶಾಖಶುದ್ಧ ೧೫ ಪುಣ್ಯ ಕಾಲದಲ್ಲೂ—

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರವುಢಪ್ರತಾಪ ವೀರನರಪತಿ ವೆಂಕಟರಾಯ ದೇವಮಹಾರಾಯರವರು ಪೆನಗೊಂಡೆ ಸಂಸ್ಥಾನದಲ್ಲು, ರತ್ನ ಸಿಂಹಾಸನಾರೂಢರಾಗಿ ಪೃಥ್ವೀಸಾಂಬ್ರಾಜ್ಯಂಗಯ್ಯುತ್ತಿರಲು, ಯಲಹಂಕ ನಾಡು ಪ್ರಭುಗಳಾದ ಚತುರ್ಥಗೋತ್ರರಾದ, ಕೆಂಪನಾಚೇಗೌಡರಯ್ಯನವರ ಪೌತ್ರರಾದ ಕೆಂಪೇಗೌಡರಯ್ಯನವರ ಪುತ್ರರಾದ ಇಮ್ಮಡಿಕೆಂಪೇಗೌಡ ರಯ್ಯನವರು— ಅದಾಗಿ

ಕೌಂಡಿನ್ಯಸಗೋತ್ರರಾದ ಆಪಸ್ತಂಭ ಸೂತ್ರರಾದ ಯಜುಶ್ಯಾಖಾ ಧ್ಯಾಯಿಗಳಾದ ದೇವರಾಯಪಟ್ಟಣಕ್ಕೆ ಪ್ರತಿನಾಮಧೇಯವಾದ ಬೆಂಗಳೂರು ವಾಸಿಗಳಾದ ವೇದಟ್ಲ ಅನಂತಭಟ್ಟರ ಪೌತ್ರರಾದ ಸಂಗಂಭಟ್ಟರ ಪುತ್ರರಾದ ಅನಂತಭಟ್ಟರಿಗೆ ಬರಸಿಕೊಟ್ಟ ಪುರೋಹಿತದಾನ ಧರ್ಮಶಾಸನ ಕ್ರಮ ಹ್ಯಾಗಂದರೆ,

ನಮಗೆ ಪೂರ್ವಾರಭ್ಯದಿಂದ ಪುರೋಹಿತ ನಡೆಯುವ ಈ ಬೆಂಗಳೂರು ಗ್ರಾಮ ಕಟ್ಟತಕ್ಕ ಬಗ್ಯೆ ಗಣಪತಿಪೂಜೆ ಮಾಡಿಸಿ, ಶಂಕುಸ್ಥಾಪನೆಮಾಡಿ, ದೇಶದವರು ಮುಂತಾದ ಹದಿನೆಂಟು ಪಣಸ್ಥರುನ್ನೂ ಅನಂತರ ಸಂಗಮೇಶ್ವರ

ಗದ್ದಿಗೆ ಪೂಜೆ ಮಾಡುವ ಕಾಲದಲ್ಲಿ ಈ ಪುರೋಹಿತ ಅನಂತಭಟ್ಟರು ಈ ಸ್ಥಳ ಜೀರ್ಣೋದ್ಧಾರಮಾಡಿದಂಥಾ ಪ್ರಭುಗಳಿಂದ ನಮ್ಮ ಈ ಪುರೋಹಿತ ಸ್ಥಿತಿಗೆ ನಿರುಪಾಧಿಕವಾಗಿ ನಡೆಯುವ ವ್ಯಾರಿಗೆ ದಾನಶಾಸನ ದಯಮಾಡಬೇಕೆಂದು ಮುಖತಃ ಕೇಳಿಕೊಂಡಿದ್ದರಿಂದ ಯಲಹಂಕ ನಾಡ ಪ್ರಭುಗಳಾದ ಚತುರ್ಥ ಗೋತ್ರರಾದ ಕೆಂಪನಾಚೇಗೌಡರಯ್ಯನವರ ಪೌತ್ರರಾದ ಪಂಪೇಗೌಡರಯ್ಯ ನವರ ಪುತ್ರರಾದ ಇಮ್ಮಡಿ ಕೆಂಪೇಗೌಡರಯ್ಯನವರು—

ಕೌಂಡಿನ್ಯಸಗೋತ್ರರಾದ ಆಪಸ್ತಂಭಸೂತ್ರರಾದ ಯಜುಶ್ಯಾಖಾ ಧ್ಯಾಯಿಗಳಾದ ವೇದಟ್ಲ ಅನಂತಭಟ್ಟರ ಪೌತ್ರರಾದ ಸಂಗಂಭಟ್ಟರ ಪುತ್ರ ರಾದ ಅನಂತಭಟ್ಟರಿಗೆ ಈ ಬೆಂಗಳೂರು ಕಸಬೆ ವಳಗೆ ಇರುವ ದೇಶದವರು ಮುಂತಾದ ಹದಿನೆಂಟು ಪಣಸ್ಥರ ಪುರೋಹಿತವನ್ನು ಮುಂದೆ ಈ ಗ್ರಾಮ ವೃದ್ಧಿಯಾಗತಕ್ಕ ಬಗ್ಗೆ ಯಂತ್ರೋದ್ಧಾರಣೆ ಮಾಡಿ ಚತುರ್ದಿಕ್ಕಿನಲ್ಲಿಯೂ ಶಿಖರಗಳನ್ನು ಕಟ್ಟಿಸಿ ಎಲ್ಲೆಕಟ್ಟು ನಿಬಂಧನೆಮಾಡಿ ಇರುವವರಿವಿಗುನ್ನೂ ಈ ಪುರೋಹಿತ ವಿಶಿಷ್ಟವನ್ನೂ ನಿಮಗೆ ಸಲ್ಲತಕ್ಕದೆಂದು—

ಕೌಂಡಿನ್ಯಸಗೋತ್ರಂರಾದ ಆಪಸ್ತಂಭ ಸೂತ್ರರಾದ ಯಜುಶ್ಯಾಖಾ ಧ್ಯಾಯಿಗಳಾದ ವೇದಟ್ಲ ಅನಂತಭಟ್ಟರ ಪೌತ್ರರಾದ ಸಂಗಂಭಟ್ಟರ ಪುತ್ರ ರಾದ ಅನಂತಭಟ್ಟರಿಗೆ-ಯಲಹಂಕ ನಾಡುಪ್ರಭುಗಳಾದ ಚತುರ್ಥಗೋತ್ರ ದವರಾದ ಕೆಂಪನಾಚೇಗೌಡರಯ್ಯನವರ ಪೌತ್ರರಾದ ಕೆಂಪೇಗೌಡರಯ್ಯ ನವರ ಪುತ್ರರಾದ ಇಮ್ಮಡಿ ಕೆಂಪೇಗೌಡರಯ್ಯನವರು ಮೇಲೆ ಬರೆದಿರುವ ಎಲ್ಲೆಕಟ್ಟು ನಿಬಂಧನೆವರಿವಿಗೂ ಈ ಮಧ್ಯೆ ನಡೆಯುವ ಪುರೋಹಿತಸ್ಥಿತಿ ವಿಶಿಷ್ಟವನ್ನೂ ನಿಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ ನೀವೇ ಅನುಭವಿಸಿ ಕೊಂಡು ಆಚಂದ್ರಾರ್ಕ್ಕಸ್ಥಾಯಿಗಳಾಗಿ ಗ್ರಾಮಶ್ರೇಯಃಪ್ರಾರ್ಥನೆಮಾಡಿ ಕೊಂಡು ಸುಖವಾಗಿ ಅನುಭವಿಸಿಕೊಂಡು ಇರುವುದೆಂದು ಬರೆಸಿಕೊಟ್ಟ ಪುರೋಹಿತ ಧರ್ಮಶಾಸನಾ—ಅದಾಗಿ—

( ಇಲ್ಲಿ ರಂಗನಾಥಪ್ರಸನ್ನ - ಎಂಬ ಸ್ವಹಸ್ತಾಕ್ಷರ ಇದೆ )

ಇದಕ್ಕೆ ಧರ್ಮಸಾಕ್ಷಿಗಳು—

ಆದಿತ್ಯ ಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ ।
ಅಹಶ್ಚ ರಾತ್ರಿಶ್ಚ ಉಭೇಚ ಸಂಧ್ಯೇ ಧರ್ಮಶ್ಚ ಜಾನಾತಿ ನರಶ್ಚ ವೃತ್ತಂ ॥
ದಾನ ಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನು ಪಾಲನಂ ।
ದಾನಾತ್ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ ॥
ಸ್ವದತ್ತಾದ್ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಂ ।
ಪರದತ್ತಾಪಹಾರೇಣ ಸ್ವದತ್ತಾ ನಿಷ್ಫಲಂ ಭವೇತ್ ॥ *

---

* ಈ ಮೇಲೆ ಉದಹರಿಸಿರುವ ಎರಡು ದಾನಶಾಸನಗಳು ಇಮ್ಮಡಿ ಕೆಂಪೇಗೌಡನಿಂದ ದಾನಪಡೆದ ಅನಂತಂಭಟ್ಟರ ವಂಶೀಯರಾದ ಶ್ರೀ॥ ವೇದಟ್ಲ ಸೂರ್ಯನಾರಾಯಣ ಶಾಸ್ತ್ರಿಗಳು "ಕಾಶೀ ಭವನ" ಗಾಂಧೀನಗರ, ಬೆಂಗಳೂರು ಇವರಲ್ಲಿದ್ದು ನನಗೆ ಬಂದವುಗಳಾಗಿವೆ. ಇದಕ್ಕಾಗಿ ಶ್ರೀ॥ ಶಾಸ್ತ್ರಿಗಳ ಉಪಕಾರವನ್ನು ಅನನ್ಯ ಭಕ್ತಿಯಿಂದ ಸ್ಮರಿಸಿಕೊಳ್ಳುತ್ತೇನೆ.

—ಸಂಪಾದಕ.

# ಜಯಪ್ರಶಸ್ತಿಯ ಭಾವಾರ್ಥ

ಕವಿಯು ಹೇಳುತ್ತಾನೆ :—

ನಿನಗೆ ಪಂಥವು ದಕ್ಕಿತು – ನಿನಗೆ ಪಂಥವು ದಕ್ಕಿತು :– ಧೀರನೇ ರೂಪ ಜಯಂತನೇ ದಿಕ್ಕುಗಳನ್ನು ನಡುಗಿಸುವವನೇ ಸೂರ್ಯನಂತೆ ಬೆಳಗುವವನೇ ಇಮ್ಮಡಿ ಕಿಂಪದೊರೆಯೇ ನಿನಗೆ ನಿನ್ನ ಪಂಥವು ದಕ್ಕಿತು –

— ಮಂಡಲಪತಿ ವೆಂಕಟರಾಯನ ಭುಜದಂಡ – ಸ್ವಾಮಿದ್ರೋಹಿಗಳ ಗಂಡನೆಂಬ ಬಿರುದನ್ನು ಧರಿಸಿ "ಚಿಕ್ಕರಾಯ" ನೆನಿಸಿ ಇಮ್ಮಡಿ ತಮ್ಮನ ಸಖ್ಯದಲ್ಲಿದ್ದೆ. ಆತನು ಖಂಡೇಂದುಧರನ ದರ್ಶನಕ್ಕೆ ಬಂದ. ಆತನ ರಾಜ್ಯ, ಭಂಡಾರ, ಬೊಕ್ಕಸ, ಆನೆ, ಕುದುರೆಗಳನ್ನೆಲ್ಲಾ "ಅಯಿಯಮಗೌಡ" ನು ಆಕ್ರಮಿಸಿದ. ದುರ್ಗಗಳನ್ನೂ ಹಿಡಿದುಕೊಂಡ. ಅವನು ತನಗೆ ಸರಿಸಮ್ಮನಾದ ಗಂಡುಗಳು ಯಾರೂ ಇಲ್ಲವೆಂದು ಮೆರೆಯುತ್ತಿದ್ದುದನ್ನು ನೋಡಿ ನೀನು ಸಾಹಸದಿಂದ ರಾಜಕಾರ್ಯಕ್ಕೆ ಮನಸ್ಸು ಮಾಡಿದೆ– ॥ ೧ ॥

— ಆಗ ಅಯಿಮಗೌಡನಿಗೆ ರಾಯಭಾರಿಗಳ ಮೂಲಕ ಹೇಳಿಕಳುಹಿಸಿದೆ. ಅವನದನ್ನು ಕೇಳಲಿಲ್ಲ. ಒಳ್ಳೆಯದಾಯಿತೆಂದು ಕೋಪಗೊಂಡು ಆನೆ ಕುದುರೆಗಳೊಡನೆ ಮುನ್ನುಗ್ಗಿ ಕೋಳಾಲವನ್ನು ಸುತ್ತುಗಟ್ಟಿದೆ. ಆ ಸೀಮೆಯನ್ನು ಧೂಳಿ ದುಗ್ಗು ಮಾಡಿದೆ. ದನಕರುಗಳನ್ನು ಸೆರೆ ಹಿಡಿದೆ. ವೈರಿ ಬಂದ ಹಗೆಗಳನ್ನೆಲ್ಲಾ ನುಗ್ಗಿ ಇರಿದು ಬಿಟ್ಟೆ. ಕಟ್ಟಾಳುಗಳೆದೆಗೆ ಝಲ್ಲೆಯಂತೆ ಆ ದಂಡನ್ನೆಲ್ಲಾ ಗೆದ್ದೆ. ಮೂರು ಲೋಕದಲ್ಲಿಯೂ ನಿನಗೆ ಸಮನಾದವರು ಇನ್ನಿಲ್ಲವೇ ಇಲ್ಲ – ॥ ೨ ॥

— ಭದ್ರವಾಗಿದ್ದ "ಬಲಗೊಂಡನಹಳ್ಳಿ" ಯ ಕೋಟೆಯನ್ನು ಹಿಡಿದುಕೊಂಡೆ. ಸಹಾಯ ಬಲಕ್ಕೆ ಕಾಯದೆ ನಿನ್ನ ಆಪ್ತ ಬಲದಿಂದಲೇ "ಹೊಸಕೋಟೆ" ಯನ್ನು ಮುತ್ತಿ ಮುಂದುವರಿದೆ. ಲೂಟಿ ಮಾಡದೆ ಲಗ್ಗೆಯೇರದೆ ಬೇಟೆರಾಯನ ಗುಡಿಯೇ ಮೊದಲಾದ ನಾಲ್ಕು ಕೋಟೆಗಳನ್ನು ಭದ್ರಪಡಿಸಿಕೊಂಡೆ. ಫಿರಂಗಿಗಳಿಂದ ಸೂಟೆವೀಡಿಸಿದೆ. ತುಂಬಿದ್ದ ಪೇಟೆಯನ್ನೆಲ್ಲಾ

ಓಡಿಸಿದೆ. ಹಗೆಗಳಿಗೆ ಕೋಟಲೆ ಕಾಣಿಸಿದೆ. ಅವರನ್ನು ಮೂಲೆಯಾಟವಾಡಿಸಿದೆ. ಭಾಪು ! ಭಾಪು !! ಎನ್ನುವಂತೆ ಕರ್ನಾಟಕದಲ್ಲಿ ಸತ್ಕೀರ್ತಿಯನ್ನು ಕೊಂಡಾಡಿಸಿದೆ– || ೩ ||

—ಸುತ್ತುಗೆರೆಗಳು ಸುರಂಗ ಮೇರುಗಳು ಎತ್ತೆತ್ತಲೂ ಮೊರೆಯುವ ವಾದ್ಯಗಳು ಮದ್ದಾನೆಗಳು, ಕುದುರೆಗಳು, ಇವುಗಳ ಬೆಡಗನ್ನು ಏನೆಂದು ಹೇಳಲಿ. ಇದು ಶಿವನಿಗೆ ಗೊತ್ತೇ ಹೊರತು ಇತರರಿಗೆ ತಿಳಿಯದು. ಈ ಮುತ್ತಿಗೆ ಬಹಳವಾಗಿದೆ. ಇದನ್ನು ಕೊಂಡಾಡಿವುದಕ್ಕೆ ಹೊತ್ತೇ ಸಾಲದು. ಧೀರರಾದ ರಾಜರಿದ್ದರೇನು. ನೀನು ಸೋಲುವುದಿಲ್ಲವೆಂದು ಜನರು ಚೋದ್ಯಪಟ್ಟು ಮಾತಾಡುತ್ತಿದ್ದಾರೆ – || ೪ ||

— ಆಡುವುದೇನು? ಮಂತ್ರಿ ಜನರನ್ನು ಕೂಡಿಸಿಕೊಂಡು ಆಲೋಚನೆ ಮಾಡಿದೆ. ಮದ್ದಾನೆಯ ಕೈಕಬ್ಬನ್ನು ವಿಳೆದುತರುವರುಂಟೇ? ಎಂದೆ. ಪೆನುಗೊಂಡೆಗೆ ಹೋಗಿ ವೆಂಕಟಪತಿರಾಜನನ್ನು ಒಪ್ಪಿಸಿದೆ. ಅವನು ಹೆದರಬೇಡವೆಂದು ಅಭಯುವನ್ನು ಕೊಟ್ಟ. ಆಗ ಶೂರರನ್ನು ಕೂಡಿಕೊಂಡು ಮನೋನುರಾಗದಿಂದ ತನ್ನವರನ್ನು ಕಾಲ ಕಳೆಯ ಬೇಡವೆಂದು ಹೇಳುತ್ತಾ ಕಾಳಗದ ನೆಲಕ್ಕೆ ಬಂದು ನಿನ್ನ ಪರಿವಾರದ ಗುಂಪಿನ ಜೋಡಣೆಯನ್ನು ಆಣಿ ಮಾಡಿದೆ – || ೫ ||

— ಪಡೆಯು ಭೋರಿಡುತ್ತ ಮುಂದುವರಿದೆ. ನಾನಾ ವಾದ್ಯಗಳೊಡನೆ "ಬಲ್ಲಾಳಪುರ" ದ ಮೂಡುಗಡೆ ಪಾಳ್ಯವಿಳಿಸಿದೆ. ಸುತ್ತುಮುತ್ತಿನ ಪಾಳೆಯಗಾರರನ್ನೆಲ್ಲಾ ಕೂಡಿಸಿಕೊಂಡೆ. ಕಡಲು ಮೇರೆ ತಪ್ಪಿದಂತೆ ವೆಂಕಟರಾಜನು ಮುತ್ತಲು ಅಪ್ಪಣೆ ಮಾಡುತ್ತಲೇ ಹೊಸಕೋಟೆಯ ಬಡಗದಿಕ್ಕಿನಲ್ಲಿದ್ದ ದಂಡು, ಯುದ್ಧಕ್ಕೆ ಮುನ್ನುಗ್ಗಿದ್ದನ್ನು ಕಂಡು, ಆ ಸೈನ್ಯದೊಡನೆ ಕಾದಾಡಿಸಿದ ಗಂಡು ನೀನು – || ೬ ||

—ಆಗ ವೆಂಕಟಪತಿರಾಜನು ತನ್ನ ಮದ್ದಾನೆ ಕುದುರೆ ಕಾಲಾಳುಗಳನ್ನು ಮುನ್ನುಗ್ಗಿಸಿದ. ಹಗೆಗಳ ಕುದುರೆಗಳನ್ನೆಲ್ಲಾ ಮಗ್ಗಲಿಗೆ ತಳ್ಳಿದ. ಜಯ ಜಯವೆಂದು ಅಬ್ಬರಿಸುತ್ತ ಮುನ್ನುಗ್ಗಿದ ಬಾಣ ಕೋವಿಗಳ ಕಬ್ಬೊಗೆಯು ತುಂಬಿಕೊಂಡಿತು. ಆಗ ಎಲ್ಲಾದಳವನ್ನೂ ನುಗ್ಗಿಸಿ ಇರಿಸಿದೆ. ರಣಗಬ್ಬಿಗರನ್ನು ಒದರಿ

ಹಾಕಿಬಿಟ್ಟೆ. ಹಗೆಗಳ ಗರ್ಭದಲ್ಲಿ ಭೀತಿಯನ್ನು ಹುಟ್ಟಿಸಿದೆ. ಕಾಳಗದ ಕಣದಲ್ಲಿ ಒಬ್ಬರೂ ಇಲ್ಲದಂತೆ ಓಡಿಸಿ ಬಿಟ್ಟೆ. ಭೂತ ಪ್ರೇತಗಳಿಗೆ ಸಂತೋಷದ ಹಬ್ಬ ವನ್ನು ಮಾಡಿಸಿದೆ - ‖ ೭ ‖

— ಆನೆಯ ಬಲವು ಮುರಿದು ಬಿದ್ದೋಡಿತು. ಅದನ್ನು ನೋಡಿ ನಿನ್ನ ಸೇನೆಯನ್ನು ಕೈಬೀಸಿ ಕರೆದೆ. ತಿರುಗಿ ಮುನ್ನುಗ್ಗಿದಾಗ ಆ ಸೈನ್ಯಾಧಿ ಕಾರಿ ವೇಂಕಟೇಂದ್ರ - ಅಯ್ಯಮಗೌಡ "ಮೊದಲಾದವರು ಮಡಿದುಬಿದ್ದರು. ಅವರು ತಮ್ಮಷ್ಟಕ್ಕೆ ತಾವೇ ಕಂಗೆಟ್ಟರು. ಮರಹತ್ತಿ ಕೋತಿಯಂತೆ ಬಾಯಿ ಬಾಯಿಬಿಟ್ಟರು. ಇದನ್ನು ನೋಡಿ ಜನರು ಆಶ್ಚರ್ಯಪಟ್ಟರು - ‖ ೮ ‖

— ಪರಿಧಾವಿ ಸಂವತ್ಸರ ಕಾರ್ತಿಕ ಶುದ್ಧ ಏಕಾದಶಿ ಭಾನುವಾರದ ದಿವಸ ಹೊತ್ತು ಮುಳುಗುವ ವೇಳೆಯಲ್ಲಿ ಹಗೆಗಳು ವೆಂಕಟತಿರಾಜನನ್ನು ದೂರದಲ್ಲೇ ಒಪ್ಪಿಸಿಕೊಟ್ಟರು. ತಮ್ಮ ವಾಹನಗಳನ್ನೆಲ್ಲಾ ಬಿಟ್ಟು ಬಿಟ್ಟು ಜೀವಿವಿದ್ದರೆ ಹಾಡಿಕೊಂಡು ಹೊಟ್ಟೆ ಹೊರೆದುಕೊಳ್ಳಬಹುದೆಂದರು. ಕೊಚ್ಚಿ ಕೊಳ್ಳುತ್ತಿದ್ದ ಈ ಹಗೆಗಳು ಹಿಂದೋಡುತ್ತಾ ದೇವರನ್ನೂ ರಾಕ್ಷಸರನ್ನೂ ನೀಲ ರತ್ನ ಕುಂಭಜ ಚಂದ್ರ ಮುಂತಾದವರನ್ನೆಲ್ಲಾ ಬೈದು ಕೊಂಡರು. ಇದೇನ ವಿಚಿತ್ರವೋ ? ಹೀಗೆ ಕಂಡವರನ್ನು ನೋಡಿ ಅವರಿಗೆ ಅಭಯವನ್ನು ಕೊಟ್ಟೆ - ‖ ೯ ‖

— ಹೇಳುವುದೇನು ? ಆಕ್ಷಣವೇ "ಧರ್ಮಕಹಳೆ" ಯನ್ನೂದಿಸಿದೆ. ಸೆರೆ ಸಿಕ್ಕಿದ ಡಾಳು ಢಮಾಮಿ ಅಂದಳ ಕೊಡೆ ಚಾಮರ ಪಲ್ಲಕ್ಕಿ ಆನೆ ಕುದುರೆ ಸೆರೆಯಾಳುಗಳನ್ನು ಕೂಡಿ ನಡೆದೆ. ಹೊಸಕೋಟೆಯನ್ನು ಬಿಡದೆ ಸಾಧಿಸಿದೆ. ಅಲ್ಲಿ ನೆಲೆಯಾಗಿ ನಾನಾ ಯುದ್ಧವಾದ್ಯ ಸಹಿತವಾಗಿ ಮುಂದೆ ಹೊಗಳುವವರು ಹಿಂದೆ ಅನೇಕ ಬಗೆಯ ಐಶ್ವರ್ಯ ಇವುಗಳೊಡನೆ ಜನರು ಜಯ ! ಜಯ ! ! ಎನ್ನುತ್ತಿರುವಂತೆ ಬೆಂಗಳೂರಿಗೆ ಬಂದೆ - ‖ ೧೦ ‖

— ಈಕಡೆ ಸುಖದಿಂದಿರಲಾಗಿ ರಾಯನು ಚಿಂತಿಸುತ್ತ ಈ ಸುದ್ದಿ ಯನ್ನು ಕೇಳಿದನು. ಆಗ ಕುಮಾರರಾಯನು ಶೂರರನ್ನು ನೆರವಿಗೆ ಕೊಟ್ಟು ರಾಜಕಾರ್ಯವನ್ನು ಮಾಡೆಂದು ಕಳುಹಿಸಿದನು. ಆಗನೀನು ಉತ್ತಮಲಗ್ನ ದಲ್ಲಿ ಹೊರೆಹೊರಟೆ. ದಂಡೆತ್ತಿ ಬಂದ ವೈರಿಗಳನ್ನು ಹೇಡಿಗೊಳಿಸುತ್ತೇನೆಂದು

ಪಂಥ ಹೇಳಿದೆ. ಗುಂಪು ಕೂಡಿಸಿ ಕೋಪದಿಂದ ಬಹಳ ಬಲವನ್ನು ಸಜ್ಜು ಮಾಡಿದೆ. ಈ ದಳವನ್ನು ಕೂಡಿಕೊಂಡು ಮೋಡಿಯಿಂದ ಬಂದೆ – ॥ ೧೧ ॥

—ಆಗ ಅನಂತರಾಜ, ಮಾಕರಾಜ, ಯಾಚಮನಾಯಕ, ಜಗ್ಗರಾಜ, ಜಗದೇವರಾಯ, ತಿಮ್ಮೇಂದ್ರ, ಸೀರ್ಯದ, ರಂಗಪ್ಪ, ಇಮ್ಮಡಿ ಬೈರ, ಪಟ್ಟದ ದಳವಾಯಿ, ಚುಂಚಣ್ಣ ಮೊದಲಾದ ರಣಗಲಿಗಳೂ ಕೂಡಿಕೊಂಡು ಬೆಂಗಳೂರಿಗೆ ಬಂದರು. ದೂರದಲ್ಲಿ ನಿಂತು ಮುತ್ತಿಗೆ ಹಾಕಬೇಕೆನ್ನುವಷ್ಟರಲ್ಲಿ ಕೋಟೆಗೆ ಎದುರು ತೋರಿಸಿ ಅವರನ್ನು ಮುಂತಡೆದು ನಿಲ್ಲಿಸಿದೆ – ॥ ೧೨ ॥

— ಲುಳಿ ಕಂಠಮಾಲೆ ಪದಕ ಮುತ್ತಿನ ಚೌಕುಳಿ ಭುಜ ಕೀರ್ತಿ ಘಂಟೆ ಸರಪಣಿಗಳೇ ಮೊದಲಾದ ಬಿರುದು ಧರಿಸಿದ ಭಲಗಾರರು ಹಳೆಯ ಸೈನಿಕರು ಕುದುರೆಯ ರಾಹುತರನ್ನು ಕೂಡಿಕೊಂಡು ಅವರ ಕಾಲುದಳಕ್ಕೆ ಮೈ ತೋರಿಸಿದೆ. ಎದುರಿಸಿದ ಶತ್ರುಗಳನ್ನು ತುಂಡು ತುಂಡು ಮಾಡಿದೆ. ಅವರ ಸಾಲ್ಮಲೆಯನ್ನು ಕಡಿದು ಅದನ್ನೆಲ್ಲಾ ಭಂಡಿಯಲ್ಲಿ ತುಂಬಿಸಿದೆ – ॥ ೧೩ ॥

— ಕಡಿದು ಕೆಳಗೆ ಬಿದ್ದಾನೆಗಳ ಕುದುರೆಗಳ ಕಾಲಾಳುಗಳ ರುಂಡ ಮುಂಡಗಳು ಕುಣಿದಾಡುತ್ತಿದ್ದವು. ರಕ್ತ ಕರುಳು ಕಾಳಿಜಗಳು ಗುಡ್ಡೆ ಬಿದ್ದವು. ಕಾಳಗದ ಕಣದಲ್ಲಿ ಶಾಕಿನಿ ಡಾಕಿನಿಗಳು ಇದನ್ನುಂಡು ದಣಿದವು. ಥಣದ ತುಂಡುಗಳು ಕುಣಿ ಕುಣಿದಾಡಿ "**ಚಂಡವಿಕ್ರಮ ಇಮ್ಮಡಿಕೆಂಪ**" ಬಾಳು ! ಬಾಳು ! ! ಎಂದು ಹರಸುತ್ತಿದ್ದಾಗಲೇ ಯುದ್ಧದಲ್ಲಿ ಜಯ ಹೊಂದಿದೆ. ಮುಂಕೊಂಡ ಏಕಾಂಗವೀರನಾಗಿ ಮರೆ ಹೊಕ್ಕವರನ್ನು ರಕ್ಷಿಸಿದೆ. ಸಮುದ್ರದಂತೆ ಗಂಭೀರನೇ ಸೂರ್ಯನಂತ್ಯೆಘನ ತೇಜಸ್ವಿಯೇ ನಿಶ್ಯಂಕ ಶೂರನೇ ಸತ್ಕೀರ್ತಿಕರಂಡನೇ ಸಂಗ್ರಾಮಧೀರನೇ ಭಾಪು ! ಎನ್ನಿಸಿಕೊಂಡೆ – ॥ ೧೪ ॥

— ನಿನ್ನ ಸಾಹಸವನ್ನುನೋಡಿ ಮನವೋಲಿನ ಮಾಕರಾಜ ಮಝು ! ಭಾಪೆಂದ. ಜನಪತಿ ಜಗ್ಗರಾಜ ಧಣಿರೇ ! ಎಂದ. ಕುಮಾರರಾಯ ಮೊನೆಕಾರನೆಂದ. ಜಗದೇವರಾಯ ಶಾಭಾಶು ! ಎಂದ. ಅನಂತರಾಜ ಮೆಚ್ಚಿ ಅಧಿಕಬಲ್ಲಿದನೆಂದ. ತಿಮ್ಮರಾಜ ಸುಪ್ರತಾಪಿಯೆಂದ. ದಳವಾಯಿ ಚುಂಚಣ್ಣ ಮೈನಿಗುರಿಸಿ ಭಳಿರೇ ಎಂದ. ಬೈರೇಂದ್ರನು ಗುಣಕ್ಕೆ ಮತ್ಸರವೇ ಪುಣ್ಯವಂತನೆಂದ. ಈ

ಅರಸರೆಲ್ಲರೂ ಏಕಾಂತದ ಮನೆಗೆ ಬಂದು ಭೀತಿಯಿಂದ ಆಲೋಚನೆ ಮಾಡುತ್ತಿದ್ದರು – ॥ ೧೫ ॥

— ಹಿಂದು ಮುಂದು ನೋಡದೆ ನಾವು ಇಲ್ಲಿಗೆ ಬಂದದ್ದೇಕೆ? ಬೆಂಗಳೂರೆಂದರೇನು? ನಾವೆಂದರೇನು? ವಿಧಿಯು ನಂಬಿಸಿ ನಿಮ್ಮನ್ನಿಲ್ಲಿಗೆ ತಂದಿತಲ್ಲಾ! ಬಂಧು ಬಳಗ ಆನೆ ಕುದುರೆ ಜನರನ್ನೆಲ್ಲಾ ಕೊಂದುಕೊಂಡೆವಲ್ಲಾ ಅಯ್ಯಯ್ಯೋ! ನಾವು ಇಲ್ಲಿಗೆ ಬಂದ ತಪ್ಪಿಗೆ ನಮ್ಮನ್ನು ಪಾರುಮಾಡೆಂದು ರಾಜದೂತರನ್ನು ಕಳುಹಿಸಿ ದೈನ್ಯದಿಂದ ಬೇಡಿದರು. ಆಮೇಲೆ ಅವರು ಬೆಳಗಿನ ಜಾವದಲ್ಲೇ ಬಂದದಾರಿ ಹಿಡಿದು ಹೊರಟರು ಇಮ್ಮಡಿ ಕೆಂಪರಾಯನೇ– ॥೧೯॥

— ತಲೆಸವರಿಕೊಳ್ಳುತ್ತಾ ಬದುಕಿಕೊಂಡೆವೆಂದರು, ನಸುಗತ್ತಲಿನಲ್ಲೇ ಅವರ ರಾಯನಿಗೆ ಹೇಳಿದರು ಆಗವನು ಇವರನ್ನು ನೋಡಿ ಕೋಪಿಸಿಕೊಂಡು ಒಬ್ಬನಿಗೆ ಸೋತ "ಬಡಿಹೋರಿ" (ಬೀಜತೆಗೆದೆತ್ತು) ಗಳಿರಾ! ಹೋಗಿರಿ ಎಂದು ಇಮ್ಮಡಿಕೆಂಪ ನೃಪನನ್ನು ಕೊಂಡಾಡಿದನು. ಆಗ ನರಪತಿಗಳೂ ಅಶ್ವಪತಿಗಳೂ ಉಡುಗೊರೆ ವಿನಯ ಪತ್ರಗಳನ್ನೂ ಬರೆಸಿ ಕಳುಹಿಸಿದರು. ಮತ್ತು ಕಾಣಿಕೆಗಳನ್ನೂ ಕೊಟ್ಟು ನಿನ್ನನ್ನು ಮೆಚ್ಚಿಸಿದರು. ನೀನು ಅದನ್ನೆಲ್ಲಾ ಪಡೆದು ಲೋಕದಲ್ಲಿ ಅತ್ಯಧಿಕವಾದ ಖ್ಯಾತಿಯನ್ನು ಸಂಪಾದಿಸಿದೆ– ॥ ೧೭ ॥

— ಚೆಂಜಿ ಮಧುರೆ ತಂಜಾವೂರು ವೇಲೂರು ಚಂದ್ರಗಿರಿ ಚನ್ನಪಟ್ಟಣ ಶ್ರೀ ರಂಗಪುರ, ನಂಜರಾಯಪಟ್ಟಣ, ಬೇಲೂರು, ಪಿರಿಯಪಟ್ಟಣ, ಸೋದೆ, ಸೊನ್ನಲಾಪುರ, ಬಂಕಾಪುರ, ಹಾನುಗಲ್ಲು, ರಾಯಚೂರು, ವಿಜಯಪುರ, ಡಿಳ್ಳಿ, ಕಾಶಿ, ರಾಮೇಶ್ವರ ಹೀಗೆ ನಾಲ್ಕು ಕಡಲಿನ ನಡುವೆಲ್ಲಾ ನಿನ್ನ ಕೀರ್ತಿಯು ಹರಡಿತು. ನಿನ್ನಂತಹ ದೊರೆಗಳು ಈ ಪ್ರಪಂಚದಲ್ಲಿಯೇ ಇನ್ನಿಲ್ಲ ಇದನ್ನು ವಿಸ್ತರಿಸಿ ಹೇಳುವುದಾದರೂ ಹೇಗೆ– ॥ ೧೮ ॥

— ಈ ರೀತಿಯಿಂದ ಯುದ್ಧದಲ್ಲಿ ಕಾದಾಡಿದೆ. ಶತ್ರುರಾಜರನ್ನು ಗೆದ್ದೆ. ಅಧಿರಾಜನನ್ನು ಮೆಚ್ಚಿಸಿದೆ. ಸಂತೋಷದಿಂದ "**ತಮ್ಮ ಭೂಪಾಲ**"ನ ಸಂಸ್ಥಾನವನ್ನು ಉಂಟು ಮಾಡಿದೆ ಶಿವಗಂಗೆ ಗಂಗಾಧರ ಸ್ವಾಮಿಯನ್ನು ವಂದಿಸಿ ಹಲಸೂರ ಸೋಮೇಶ್ವರನ ದಯ ಪಡೆದೆ. ಗಮ್ಮಳಾಪುರದ ಸದ್ಗುರು ನಂಜೇಶ್ವರನ ಕೃಪೆಯನ್ನೆಲ್ಲಾ ಪಡೆದು ಸೌಖ್ಯವಿರಾಜಮಾನನಾಗಿದ್ದೀಯೆ. "ಯಲಹಂಕ"

ನಾಡಿನ ದೊರೆಯೇ ಸುಂದರರೂಪನೇ ಮಹಾ ಪ್ರತಾಪಿಯೇ "**ನಾಚಯು ಕೆಂಪ ದೊರೆಯು**" ಮಗನಾದ ಇಮ್ಮಡಿ ಕೆಂಪಭೂಪತಿಯೇ ಸುಖವಾಗಿ ಸುಸ್ಥಿರನಾಗಿ ಬಾಳು – ॥ ೧೯ ॥

ಒಂದನೆಯ ಭಾಗ ಮುಗಿದುದು

## ಎರಡನೆಯ ಭಾಗ

ಭಲಾ ! ಭಲಾ !! ವೀರವಿಕ್ರಮ ಇಮ್ಮಡಿ ಕೆಂಪ ಧೊರೆರಾಯಾ-ನಿನಗೆ ಈ ಪ್ರಪಂಚದಲ್ಲಿ ಎದಿರಾರು ? – ॥ ಪಲ್ಲವಿ ॥

— ಯಲಹಂಕನಾಡಿನ ಶಾಸನೋದ್ಧಾರನಾದ ಧೀರಕೆಂಪೇಂದ್ರನ ಕುಮಾರನೂ ರಣ ಸಂಗ್ರಾಮ ಪಾರ್ಥಿವನೂ ಆದ ಇಮ್ಮಡಿ ಕೆಂಪದೊರೆಯು ಗಂಗಾಧರೇಶ್ವರನ ಕರುಣದಿಂದ ಸಿಂಹಾಸನಾರೂಢನಾಗಿದ್ದಾಗ ಸಾರ್ವಭೌಮನು ತನಗೆ ರಾಜ್ಯಾಧಿಕಾರವನ್ನು ಳಿಸಿಕೊಡಬೇಕೆಂದು ಮಂತ್ರಿಜನಗಳ ಮುಖಾಂತರ ನಿನಗೆ ಹೇಳಿ ಕಳುಹಿಸಿದನು. ಪ್ರಭುಕುಲ ಶಿರೋಮಣಿಯಾದ ನಿನಗೆ ಸಮನಾದವರಿದ್ದಾರೆಯೇ ? – ॥ ೧ ॥

— ನರೇಶ್ವರನ ಸಿಂಹಾಸನಕ್ಕೆ ದಿಕ್ಕಿಲ್ಲವಾಗಿತ್ತು. ನೆರೆಹೊರೆಯ ದೊರೆಗಳು ಗರ್ವದಿಂದ ಸೀಮೆಭೂಮಿಯನ್ನೆಲ್ಲಾ ಸೂರೆ ಮಾಡಿದರು. ರಾಜ್ಯವನ್ನು ಕಟ್ಟಿಕೊಂಡರು. "ಪೆನುಗೊಂಡೆ"ಯ ದುರ್ಗಕ್ಕೆ ಮುತ್ತಿಗೆಯನ್ನು ಹಾಕಿದ್ದರು. ನೀನು ಬಾಲಯ್ಯನ ಮೂಲಕ ಅಧಿರಾಜನಿಗೆ "ರಾಯಸ" ವನ್ನು ಬರೆಸಿದೆ. ಉಡುಗೊರೆ ಭೂಷಣ ವಸ್ತುಗಳನ್ನೂ ಕಳುಹಿಸಿದೆ. ಮಂತ್ರಿಗಳ ಮೂಲಕ ಕಾರ್ಯಪ್ರವೃತ್ತನಾದೆ- ॥ ೨ ॥

— ಬುದ್ಧಿವಂತಿಕೆಯಿಂದ ರಾಯನಿಗೆ ಬರುವಂತೆ ಬಿನ್ನೈಸಿದೆ. ಹೇಳಿದ ಕಾರ್ಯದ ವ್ಯವಸ್ಥೆಯನ್ನು ಮಾಡುವುದಕ್ಕೆ ಕೂಡಲೇ ದೊರೆ ಮನ್ನೆಯರನ್ನು ಕೂಡಿಸಿದೆ. ಮದಗಜಗಳು ಮುನ್ನೂರು ಕುದುರೆಗಳು ನಾಲ್ಕೈದು ಸಾವಿರ ಒಂಟೆಗಳ ಮೇಲೆ ಸಾಗಿಸಿದ ಆಯುಧ ಬೊಕ್ಕಸ ಗುಡಾರವು ಲೆಕ್ಕವೇ

ಇಲ್ಲ. ನಿನ್ನ ದಂಡಿನ ವಿವರವನ್ನು ಹೇಳುವುದು ಅಸಾಧ್ಯವೇ ಆಗಿದೆ ದೊರೆಯೇ - ॥ ೩ ॥

— ರಾಜಾಧಿರಾಜರೆಲ್ಲ ಬಂದರು. ತಿಮ್ಮರಾಜ, ರಂಗಪತಿರಾಜ, ಮಾಕ ರಾಜ, ನಂದ್ಯಾಲರಾಜ, ವೆಂಕಪ್ಪರಾಜ, ಅಳಿಯರಾಜನೊಬ್ಬ ಶ್ರೀರಂಗಪತಿ ರಾಜ ಸೂರ್ಯನ ತೇಜಸ್ಸಿನಂತಹ ಮಾನ್ಯರೂ ರವಿ ತೇಜಸ್ಸನ್ನುಣ್ಣುವವರೂ ಆದ ಮೂರ್ತಿರಾಜ ಮೊದಲಾದ ಬಾಂಧವರು "ವೆಂಕಟದೇವರಾಜ"ನ ಎದು ರಿಗೆ ಕೂಡಿ ನಡೆದರು ಈ ಪೌಜನ್ನು ಏನೆಂದು ಹೇಳಲಿ. ನೂತನ ಭೋಜ ರಾಜನೇ - ॥ ೪ ॥

— ನೆಲಿಗೋಟಿ ತಿಮ್ಮನಾಯಕ ದಾಮೆರ್ಲಿ ವೆಂಕಟಪ್ಪನಾಯಕ ದಾವಿಳ ವೆಂಕಟನಾಯಕ, ರಾಮಭದ್ರರಾಜ, ಈ ಬಲಶಾಲಿಗಳೂ, ದಳವಾಯಿ ಪಾಪಯ್ಯ, ಪವಡದ ಕೃಷ್ಣಪ್ಪ, ಚವರದ ನಾರಾಣೇಂದ್ರ, ಈ ಗಂಡುಗಲಿ ಗಳೂ ತೆಲುಗ ದೊರೆಗಳೂ ಕೂಡಿಕೊಂಡು ಎಡ-ಬಲಗಳಲ್ಲಿ ನಡೆಯುವ ದಂಡನ್ನು ಏನೆಂದೆನ್ನಲಿ ದಾನಶೂರನೇ- ॥ ೫ ॥

— ಜಗದೇವರಾಯ, ಚಿಕ್ಕರಾಯ, ತಮ್ಮಯ್ಯಗೌಡ ಬಗೆಬಗೆಯ ಪಾಳೆಯಗಾರರು, ಮಂತ್ರಿಗಳ, ದೊರೆಗಳ, ಮಿತಿಯಿಲ್ಲದ ಸೈನ್ಯ ಮಾರ್ಬಲದ ಸೊಗಸನ್ನು ವರ್ಣಿಸುವುದು ಸಾಧ್ಯವಲ್ಲ. ಜಗಳಕ್ಕೆ ಸಿದ್ಧರಾದ ಪಟುಭಟರು, ಊಳಿಗದವರು, ವೀರವಿಕ್ರಮರು, ರಾಯರು, ರಾಹುತರು, ಮಂತ್ರಿ ಪ್ರಧಾ ನರು, ರಾಣಿವಾಸದ ದಂಡಿಗೆ ಪಲ್ಲಕ್ಕಿಗಳ ಸಾಲುಗಳನ್ನು ವರ್ಣಿಸುವುದು ಅಸಾಧ್ಯವಯ್ಯಾ ! ಇಮ್ಮಡಿ ಕೆಂಪರಾಯಾ !!- ॥ ೬ ॥

— ನಾನಾ ದಿಕ್ಕಿನ ಮನ್ನೆಯರು, ಮಾರ್ಬಲವು, ಲೆಕ್ಕವಿಲ್ಲದಷ್ಟು ಕಾಲುದಳವು, ಸೊಕ್ಕಿದಾನೆಗಳು, ಮಾವುತರು, ಕುದುರೆಯೇರಿದ ಸೈನಿಕರ ದಂಡು. ಹೆಚ್ಚುಮಾತೇನು? ಕೂರ್ಮನ ಬೆನ್ನು ಕುಸಿಯಿತು. ದಿಕ್ಕುಗಳ ದುರಿದವು. ದಿಗ್ಗಜಗಳು ಹೆದರಿದವು, ನೆಲಬಿರಿಯಿತು. ಇದನ್ನೆಲ್ಲಾ ಶಿವನೇ ಬಲ್ಲ. ನಿನ್ನ ದಂಡಿಗೆ ಎದುರಿಕ್ಕಿ ಬರುವರಿಲ್ಲ. ಸಾಗುತ್ತಿರುವ ನಿನ್ನ ಸಾಹಸದ ಬಲವನ್ನೇನೆಂದು ಹೇಳಲಿ? ದೊರೆಯೇ - ॥ ೭ ॥

— ಸಂತೋಷಪಟ್ಟು ರಾಜಾಧಿರಾಜರು, ಮಂತ್ರಿಗಳು, ನಾಯಕರು, ದೊರೆಗಳು, ಮಾನ್ಯರು, ನೇರವಾಗಿ ಹೋಗಿ ರಾಯರೆದುರಿಗೆ ವಂದನೆಯನ್ನು ಮಾಡಿದರು. ಓಲಗವಿತ್ತ ರಾಯನಿಗೆ ಮನ್ನಣೆಯಿತ್ತು, ಕಾರ್ಯೋನ್ಮುಖ ರಾಗಿ ನಡೆಯ ಹೇಳಿದೆ "ಕದಲಿ-ನೆಲ್ಲಿ-ಪಪ್ಲ" ಕಣಿವೆಗಳ ಎದುರಿಗೆ ರಾಯರ ದಂಡಿಳಿಯಿತು. ಆಗ ಸುಖವಾಗಿ ಕಣಿವೆಯನ್ನು ದಾಟಿದರು. ಭಾನು ತೇಜನೇ – ॥ ೮ ॥

— ನಮ್ಮ ಕಾರ್ಯಕ್ಕಿನ್ನು ಯೋಚನೆಯೇಕೆಂದು ಹೇಳಿ ನಡೆದೆ. ಪಯಣದ ಮೇಲೆ ಪಯಣ ಬಂದೆ. ಸೈನ್ಯವು "ಕೋಗಿಲೇರಿ "ನಲ್ಲಿಳಿಯಿತು. ಮುಂದೆ ದಂಡನ್ನು ಸಾಗಿಸುವುದು ಹೇಗೆಂದು ಅಂಜಿದರು. ರಾಯರು, ಮಂತ್ರಿ ಗಳು ಎಲ್ಲರೂ ಯೋಚನೆ ಮಾಡಿದರು. ಎಲ್ಲರೂ ಯೋಚಿಸಿ ಮಾತನಾಡಿ ಕೊಂಡರು. ಆಗಬೇಕಾದದ್ದನ್ನು ವಿವೇಕದಿಂದ ಯೋಚಿಸಿದರು ನಿನ್ನ ಬಲ ವೆಂತಹುದೋ ಭಲ ! ಭಲಾ !! ರಣರಂಗಶೂರನೇ– ॥ ೯ ॥

— ರಾಯನು ಮಂತ್ರಿಗಳನ್ನು ಕರೆಸಿ "ನೊರಸನೊನ್ನೆಯ "ರು ಕೂಡಿ ನಡೆಯದಿದ್ದರೆ ನಡೆಯುವುದಾದರೂ ಹೇಗೆ ? ಎಂದು ಹೇಳಿದ. ಆಗ ಮಂತ್ರಿಗಳು "ಇಮ್ಮಡಿ ಕೆಂಪ"ನು ಸತ್ಯಭಾಷೆಯ ಹರಿಶ್ಚಂದ್ರನು. ಮರೆಹೊಕ್ಕ ವರನ್ನು ಕಾಯುವಧೀರನು. ನಂಬಿಕೆಯನ್ನು ಕೊಟ್ಟು ಕಪ್ಪುವನಲ್ಲ. ನೀವು ನಂಬಿ ನಡೆಯಿರಿ " ಎಂದು ಹೇಳಿ ಸಂತಸಪಡಿಸಿದರು ಆಗ ರಾಯನು ನಿನ್ನನ್ನು ನಂಬಿ ಮೆಚ್ಚುತ್ತಿದ್ದನು – ॥೧೦ ॥

— ರಾಯನ ದಂಡು "ಬೇತಮಂಗಲ " ದಲ್ಲಿಳಿಯಿತು. ಆಗ ರಾಯನು "ಕದನ ವಿಕ್ರಮ ಕೆಂಪ ದೊರೆ"ಯೇ ನಮಗೆ ನಂಬುಗೆಯನ್ನು ಕೊಡಬೇಕೆಂದು ಕೇಳಿದ. ಅವನಿಗೆ ನಂಬುಗೆಯನ್ನು ಕೊಟ್ಟೆ. ಆಮೇಲೆ ರಾಯನ ದಂಡನ್ನು ಕೂಡಿ ಕೊಂಡು ದೊರೆಗಳು ಮನ್ನೆಯರು ಮಂತ್ರಿಗಳು ತಮ್ಮ ಬಲಸಹಿತ ಬಂದು ಸೇರಿದರು. ಭಲಾ ! ಕದನಕದಚೌಪಟ ಮಲ್ಲಾ ! ನವ ಕಬ್ಬುವಿಲ್ಲಾ !!–॥೧೧॥

— ನೂಲಬಲ, ಮಾರ್ಬಲ, ಸೊಗಸಿನಿಂದ ಬರುವ ದಳವಾಯಿಗಳು ಪಾಳ್ಯ ಪಾಳ್ಯಗಾರರು ಬಹಳ ಚತುರಂಗಬಲ ಕಾಲಾಳುಗಳ ಸಂದಣಿ ಖಡ್ಗ ಕಾರ್ಯವನ್ನು ತಿಳಿದ ಮಂತ್ರಿಗಳು ಸಪ್ತಾಂಗದ ದಳವಾಯಿಗಳು ಅಳಿಯ

ವರ್ಗಗಳು ಊಳಿಗದವರು ಶೂರತನವನ್ನು ತೋರಿಸುವರಾಹುತರು ಭೂಲೋಕ ದಲ್ಲೇ ನಿನ್ನ ಪರಿವಾರಕ್ಕೆ ಸಮನಿಲ್ಲ - ॥ ೧೨ ॥

— ಕೆರೆಯೂರ ತಿಮ್ಮನಾಯಕನು ಸುತ್ತಣರಾಜರು ಹೊಸಕೋಟೆಯ ತಮ್ಮಧೀರನು ದೇವಂಡ ಹಳ್ಳಿಯ ಜೇನ ಭೈರನು ಚಿಕ್ಕ ಬಲ್ಲಾಳಪುರದ ಬೈರೇಂದ್ರನು "ಮೈಸೂರವರು" ಮಾಸ್ತಿಯ ಕರಿಯೇಂದ್ರನು ಜವ್ವಾದಿಯ ಈ ನರವೀರನು ಹೊಸೂರು ಚಂದ್ರಶೇಖರನು ಬಾಗಲೂರ ಯರ್ರೇಂದ್ರನು ಈ ಎಲ್ಲರನ್ನೂ ಕೂಡಿಕೊಂಡು ರಾಯರನ್ನು ಎದಿರುಗೊಂಡೇ- ॥ ೧೩ ॥

— ವಿನಯದಿದಂದ "ವೆಂಕಟಪತಿರಾಯ" ನನ್ನು ಕಂಡು ಸನ್ಮಾನಿತ ನಾಗಿ ಭೂಷಣವನ್ನೂ ರಾಮಭಭ್ರ ನೆಂಬಾನೆಯನ್ನೂ ಕುದುರೆಯನ್ನೂ ಕಾಣಿಕೆ ಕೊಟ್ಟೆ. ಮುಂದಿನ ಆಗುಗಳನ್ನೆಲ್ಲಾ ತಿಳಿಸಿದೆ. ರಾಯನ ಆಗುಗಳ ನ್ನೆಲ್ಲಾ ಅರಿಶುಕೊಂಡೆ. ನಿನ್ನೊಡನೆ ಬಂದ ರಾಜರನ್ನೆಲ್ಲಾ ಕಾಣಿಸಿದೆ. ಭೂಲೋಕದಲ್ಲಿ ಕೀರ್ತಿಯನ್ನು ಪಡೆದೆ. ವನಧಿಗಂಭೀರನೇ ಮೋಹನ ಮೇರುಧೀರನೇ - ॥ ೧೪ ॥

— "ಅರಿರಾಯರ ಶರಭಭೇರುಂಡ ರಾಯರ ಗಂಡ ತೆರಳು ನಡೆಯೆಂದು ಹೇಳಿ ಭೇರಿಯನ್ನು ಹೊಡೆಸಿದೆ. ಬಗೆ ಬಗೆಯ ಚತುರಂಗ ಕಾಲಾಳನ್ನೂ ದೊರೆ ಮನ್ನೆಯರನ್ನೂ ತೆರಳ ಹೇಳಿದೆ. ಯುದ್ಧವಿಕ್ರಮಿಗಳಾದ ಭಟರು ಮುಕ್ಕಣ್ಣ ಶಿವನು ಝುದ ಬಸವನ ಡಂಕೆಯುಲೊರಗದು ತೆರಳುವಂತೆ ತೆರಳಿದರು. ನೀನು ? ಶುಭಲಗ್ನದಲ್ಲಿ ಹೊರಟು ಮುಂದೆ ನಡೆದೆ. ಪುಷ್ಪಕೋದಂಡನೇ ಆಹವೋದ್ದಂಡನೇ - ॥ ೧೫ ॥

— ಬಲ್ಲಾಳಪುರದವರೆಗೆ ನುಗ್ಗಿ ಧಾಳಿ ಮಾಡಿದೆ. ಸೆರೆ ಸೂರೆ ಮಾಡಿದೆ. ಕಾಳಗದಲ್ಲಿ ಎದಿರುಬಿದ್ದವರನ್ನು ಕಡಿದೆ. ರಾಜ್ಯವನ್ನು ಸೆಳೆದುಕೊಂಡೆ. ಹಿರಿ ಬಲ್ಲಾಳಪುರಕ್ಕೆ ಬಂದೆ. ಆಗ ದಳವಾಯಿ ತಮ್ಮಧೀರನು ಸಂಧಾನಕ್ಕೆ ಬಂದು ನಂಬಿಕೆಯನ್ನು ಕೇಳಿದ. ಆಗಲೇ ನಂಬಿಕೆ ಕೊಟ್ಟು ವಸ್ತು ಭೂಷಣಗಳನ್ನೂ "ರಾಜಹಂಸ-ಮುತ್ತಿನ ಚಂಡು" ಎಂಬ ಆನೆ ಕುದುರೆಗಳನ್ನೂ ರಾಯನಿಗೆ ಕೊಡಿಸಿ ಪರಾಕ್ರಮಿಯೆನಿಸಿಕೊಂಡೆ - ॥ ೧೬ ॥

—ಪಾಲುಮಾಲದೆ ಪಲವಳಿಯ ಬಾಲಯ್ಯನನ್ನು ಕರೆಸಿ ರಾಯರನ್ನು ಕಾಣಿಸಿದೆ. ತಾಳಿ ಚೌಕುಳಿ ಪದಕ ಭೂಷಣಗಳನ್ನು ಕೊಡಿಸಿ ಶಭಾಸು! ಎಂದೆನ್ನಿಸಿದೆ. ಅವನಿಗೆ ಸ್ವಲ್ಪ ರಾಜ್ಯವನ್ನೂ ಕೊಡಿಸಿ ಸಮಾಧಾನ ಪಡಿಸಿದೆ. ಮುಂದೆ ದಂಡು ನಡೆಸಿ "ಮುದಿಗೆರೆ" ಯಲ್ಲಿ ಪಾಳ್ಯವಿಳಿಸಿದೆ. ಸಂಗರಶೂರನೆ. ನೇಮಗಾರನೇ ಶಿವನ ಕೃಪೆಯನ್ನು ಪಡೆದು ಸ್ಥಿರವಾಗಿ ಬಾಳು !!— ॥ ೧೭ ॥

— ದಂಡು ವೇಗದಿಂದ ತೆರಳಿತು "ಕಡಕತ್ತೂರ" ಕೆರೆಯ ಏರಿಯ ಬಳಿಯಲ್ಲಿಳಿಯಿಸಿದೆ. ಸೀರಿಯದ ಅರಸು ರಂಗಪ್ಪನನ್ನು ಕರೆಸಿದೆ. ರಾಯರನ್ನು ಕಾಣಿಸಿದೆ. "ರಣಭೈರವ" ನೆಂಬಾನೆಯನ್ನೂ ಕುದುರೆಗಳನ್ನೂ ಭೂಷ ಣಾಂಬರಗಳನ್ನೂ ಕೊಡಿಸಿದೆ. "ಚಲುವರಾಯ" ನೆಂಬಾನೆಯನ್ನೂ ಸೀರೆಯ ದವರ ಕೈಯಿಂದ ತೆಗೆದುಕೊಂಡೆ ಅರಿವಜ್ರದಂಡಾ! ಇಮ್ಮಡಿ ಕೆಂಪರಾಯನೇ ನಿನಗೆ ಜಗತ್ತಿನಲ್ಲಿ ಸರಿಯಾದವರು ಯಾರು?— ॥ ೧೮ ॥

— ಹೆಸರಾದ ಮನ್ನೆಯರು, ಮಂತ್ರಿಗಳು, ಮೊದಲಾಗಿ ಹಲವು ರಾಜರನ್ನು ಕೂಡಿಕೊಂಡು ಹೋಗಿ "ಪೆನುಗೊಂಡೆ"ಯನ್ನು ಮುತ್ತಿದೆ. ರಾಯನಿಗೆ ಪಟ್ಟಣವನ್ನು ಒಪ್ಪಿಸಿದೆ. ಪಾಳೆಯದಲ್ಲೇ ಅರಸುಗಳನ್ನು ನಿಲ್ಲಿಸಿದೆ. ಶೂರಯೋಧಿಯೆನ್ನಿಸಿಕೊಂಡು ರಾಯರನ್ನು ಮೆಚ್ಚಿಸಿದೆ. ಇದರಿಂದ ಹಿರಿದಾದ ಪರಬಲಾಂತಕ ಭೀಮ-ಬಾಹು ಬಲರಾಮ ನೆಂಬ, ಕೀರ್ತಿಯನ್ನು ಪಡೆದೆ. ಭಳಿರೇ! ದೊರೆಗಳ ದೇವನೂ, ರಾಯನೂ ನೀನೇ ॥ ೧೯ ॥

— ಭಾವಸಂವತ್ಸರದ ಮಾಘಶುದ್ಧ ಪಂಚಮಿ, ಸುಮುಹೂರ್ತ, ಶುಭಲಗ್ನದಲ್ಲಿ "ವೆಂಕಟಪತಿರಾಯ"ನಿಗೆ ಪಟ್ಟವನ್ನು ಕಟ್ಟಿದೆ. ರಾಜರೆಲ್ಲರೂ ಕೊಂಡಾಡುವಂತೆ, ರಾಜಕಾರ್ಯವನ್ನು ನಿಲ್ಲಿಸಿ ಲೋಕದಲ್ಲಿ ಸೂರ್ಯ, ಚಂದ್ರರಿರುವವರೆಗೂ ಕೀರ್ತಿಯನ್ನಾರ್ಜಿಸಿದೆ. ಇಮ್ಮಡಿ ಕೆಂಪದೊರೆಯೇ ನೀನು ಸುಪ್ರಭಾವನೇ ಆಗಿದ್ದೀಯೆ ॥ ೨೦ ॥

— ರಾಯನ ಓಲಗಕ್ಕೆ ಬಂದು ರಾಜರಾಜರ ಅಂತರಂಗವನ್ನೆಲ್ಲಾ ತಿಳಿದುಕೊಂಡೆ. ಅವರವರಿಗೆ ತಕ್ಕ ಅಂತರದಂತೆ ಕಾಣಿಸಿ ಪಗುದಿಗಳನ್ನು ಕೊಡಿಸಿದೆ. ಅವರಿಗೆ ಚಿಂತೆ ಹರಿಸಿದೆ. ಪಂಥದಲ್ಲಿ "ಮೈಸೂರವರ"ನ್ನು ಕರೆಸಿ "ಆಣೆಮುತ್ತಂ"ಬಾನೆಯನ್ನೂ, ಆರುಕಾಂತಿ ಮುತ್ತುಗಳು, ಕರ,·ಕಂಠಮಾಲೆ

ಸರ ಮುಂತಾದ ಕಾಣಿಕೆಯನ್ನೂ ಕೊಡಿಸಿದೆ. ಹೀಗೆ ಕೀರ್ತಿಪಡೆದ ಇವ್ಮಡಿ ಕೆಂಪರಾಯನೇ || ೨೧ ||

ಮಹಾಮಂಡಲೇಶ್ವರ "ವೀರವೆಂಕಟರಾಯ"ನು ಕೆಲಸೀಮೆಯನ್ನು ಗೆದೆಯಬೇಕೆಂದನು. ತಡಮಾಡದೆ, ಸಂಗ್ರಾಮ ಭೀಮನಂತೆ, ಅನೇಕ ರಾಜರನ್ನು ಕೂಡಿಕೊಂಡು, ಸಾರ್ವಭೌಮ ದಿಗ್ವಿಜಯ ಸುತ್ರಾಮ, ಸ್ವಾಮಿದ್ರೋಹರ ಗಂಡ, ಆಹವೋದ್ದಂಡ ಭಲಾ! ಎಂದೆನ್ನುತ್ತಿರುವಂತೆ ಮುಂದೆ ನಡೆದೆಯೋ - || ೨೨ ||

— ವಸಂತನ ಸೀಮೆ ಭೂಮಿಯನ್ನು ಧಾಳಿಮಾಡಿದೆ. ಮಲೆತವರ ಕೋಟೆಗಳನ್ನೆಲ್ಲಾ ಧೂಳು ದುಗ್ಗುಮಾಡಿ ಕೋಲಾಹಲಮಾಡಿದೆ. ತಾಳಲಾರದೆ ವಸಂತರಾಜನು ಆಲೋಚಿಸಿದ. ನಿಮ್ಮ ಪಾಳೆಯಕ್ಕೆ ಬಂದು ನಿನ್ನ ಕಾಲಿಗೆ ಶರಣೆಂದು ಹೇಳಿ ಬೇಡಿಕೊಂಡ. ಅವನಿಗೆ ಆದಷ್ಟು ಕೊಟ್ಟು ಅವನನ್ನು ಕಾಪಾಡಿದೆ. ಕೆಂಪರಾಯಾ - || ೨೩ ||

— ಆ ಮೇಲೆ "ಮಲೆಯಹಂಪ"ನ ಸೀಮೆಗೆ ನುಗ್ಗಿದೆ. ಹಸುಗಳನ್ನು ಮೆಟ್ಟಿ ಹಿಡಿದುಕೊಂಡೆ. ಆ ಸೀಮೆಯನ್ನೆಲ್ಲಾ ಮುತ್ತಿ ಮುಸುಕಿದೆ. ಹಗರಣ ಮಾಡಿ ಎದುರು ಬಿದ್ದವರ ತಲೆಯನ್ನು ಚಂಡಾಡಿದೆ. ಆ ಮೇಲೆ "ಹಂಡೆಯ "ಹಂಪೆರಾಜ" ಬಂದು ಅಡ್ಡಬಿದ್ದು ಮರೆಹೊಗಲು ಮನ್ನಿಸಿದೆ. ಭೂಮಂಡಲದ ರಾಯರೆಂಬ ಹಕ್ಕಿಗೆ ನೀನು ಗಂಡನು ಪ್ರಚಂಡನು, ವೈರಿಗಂಡ ಮಾರ್ತಾಂಡ, ಮಂಡಲಾಧಿಪ ಕೆಂಪರಾಯನೇ - || ೨೪ ||

— ಎಂಟು ದಿಕ್ಕಿನ ದೊರೆಗಳು, ಹಲಸಿ, ಲೋಳ, ತುಳಶಾಪುರ ಕಲುಬುರಗಿ, ವಿಜಾಪುರ, ವೋರುಗಲ್ಲು, ಅಹಂಮ್ಮನಗರಗಳು, ಘಟ್ಟ, ತುಳ, ಮಲೆಯಾಳದವರೆಲ್ಲರೂ ಇದೆಲ್ಲಿಯ ಪ್ರಳಯವೆಂದು ಬಾಯಿಬಾಯಿ ಬಿಟ್ಟರು. ಹಗೆಗಳೆಲ್ಲರೂ ವಿಧಿಯನ್ನು ದೂರುವರು. ಜಗಕ್ಕೆ ಬಲ್ಲಿದನೇ, ಮುಕ್ಕಣ್ಣನಂತೆ ಭಲ್ಲೆದರಾಯನೇ - || ೨೫ ||

— ಕೆಂಪರಾಯನೆಂದರೆ ಅರಸರು ನಡುಗುವರು. ಅವರು ತಮ್ಮ ಇಂಪು, ಸೊಂಪುಗಳನ್ನು ಬಿಟ್ಟು ಕಪ್ಪಕಾಣಿಕೆ ಕೊಡುವರು. ತಮ್ಮನ್ನು ಕಾಪಾಡೆಂದೂ ನಿನ್ನ ಛತ್ರದ ನೆರಳಿನಲ್ಲುಳಿಸೆಂದೂ ಬೇಡುವರು. ಹಾಗೆ

ಹೆದರುವವರನ್ನು ಕರೆದು ಅಭಯಹಸ್ತದ ಕೈನೀಡಿ ಕಾಪಾಡಿದ ದೊರೆಯೇ, ನಿನಗೆ ಸರಿಯುಂಟೇ – ‖ ೨೬ ‖

— ಆ ಬಳಿಕ "ಪೂಟಕೂರ" ಪಾಳೆಯದಿಂದ ಬಿಜ್ಜಾವರದ ಸೀಮೆಗೆ ಧಾಳಿಮಾಡಿದೆ. ಇಮ್ಮಡಿ ಚಿಕ್ಕಗೌಡನು ಶರಣುಬರಲು, ಅವನನ್ನು ಕಾಪಾಡಿದೆ. ಅವನಿಂದ, ಕುದುರೆ, ಒಡವೆಗಳು, ಹಣವನ್ನು ತೆರಸಿದೆ. ರಾಜ್ಯವನ್ನು ಬಿಡಿಸಿದೆ. ರಾಯರನ್ನು ಕಾಣಿಸಿ ನಂಬಿಕೆಕೊಡಿಸಿ, ಅರಸುತನವಿತ್ತೆ. ದೊರೆಗಳ ಶಿರೋರತ್ನ ಸುಗುಣಮೋಹನ್ನಾ ! ಭಲಾ ! ಎನ್ನಿಸಿಕೊಂಡೆ – ‖ ೨೭ ‖

— ಬಳಿಕ "ರಣಭೈರವನ ಸೀಮೆ"ಗೆ ನುಗ್ಗಿದೆ. ರಣಭೀತಿಗೊಳಿಸಿದೆ. ಎದುರುಬಿದ್ದವರನ್ನು ತರಿಸಿದೆ. ರಣಭೂತಗಳನ್ನು ರಣಶೂರನಾಗಿ ಕುಣಿಸಿದೆ. ಯುದ್ಧಬಯಸಿದ "ಹೊಸವೂರ"ನ್ನು ತಳ್ಳಿಬಿಟ್ಟು ಭಯಪಡಿಸಿದೆ. ತಿರುಗಿ ಎದಿರುಬೀಳಲು, ಅದನ್ನು ಧೂಳು ದುಗ್ಗುಮಾಡಿ ರಣವಿಜಯ, ರಣಧನಂಜಯ, ರಣಹಮ್ಮೀರಾ, ಭಳಿರೇ ! ಎನಿಸಿಕೊಂಡೆ — ‖ ೨೮ ‖

—ರಣಭೈರವನು ಹೆದರಿ ಮರೆಹೊಕ್ಕನು. ಅವನಿಗೆ ಅಭಯವಿತ್ತೆ. ಅವನಿಂದ ಧನ ಕನಕ ರಥ ಮದ್ದಾನೆಗಳನ್ನು ರಾಯನಿಗೆ ಕೊಡಿಸಿದೆ. ಕುಂದುರಿಪೆ ತಿಮ್ಮೇಂದ್ರನನ್ನು ರಾಯರಿಗೆ ಕಾಣಿಸಿ ರಾಜ್ಯವನ್ನೂ ಆನೆ ಕುದುರೆಗಳನ್ನೂ ಬಿಡಿಸಿ ಅವನಿಂದ "ಕುಮಾರಸ್ವಾಮಿ" ಯೆಂಬ ಮದ್ದಾನೆಯನ್ನು ತೆಕ್ಕೊಂಡು ಭಾಪು ಮೊನೆಗಾರ ಇಮ್ಮಡಿ ಕೆಂಪನೆನಿಸಿಕೊಂಡೆ ‖೨೯‖

— ದಕ್ಷಿಣ ಕಾಶಿಯಾದ ಶಿವಗಂಗೆ ಗಂಗಾಧರೇಶ್ವರನ ಪಡಿತರಕ್ಕೆ ಮೊದಲಿದ್ದ "ತಿರುಮಣಿ" ಗ್ರಾಮ ಹೋಗಿತ್ತು. ರಾಯನಿಗೆ ಇದನ್ನು ತಿಳಿಸಿ ಆ ಗ್ರಾಮವನ್ನು ತಿರುಗಿ ಕೊಡಿಸಿದೆ. ದಾನಪತ್ರವನ್ನು ಬರೆಸಿಕೊಟ್ಟು ಧರ್ಮಕೀರ್ತಿಯನ್ನಾರ್ಜಿಸಿದೆ. ಸಚ್ಚರಿತ್ರನಾದ ನಿನ್ನ ಅರಸುತನಕ್ಕೆಣೆಯುಂಟೇ? ಪ್ರಭು ಶಿರೋಮಣಿಯೇ – ‖ ೩೦ ‖

—ಮೊರೆ ವಜೀರರ ಕೈಯಲ್ಲಿ ಕಪ್ಪವನ್ನು ತೆರಿಸಿದೆ. ರಾಜ್ಯ ಬಿಡಿಸಿದೆ. ಆಹುದೆಂದು ರಾಯನ ಸಿಂಹಾಸನವನ್ನು ನಿಲ್ಲಿಸಿದ್ದಕ್ಕೆ ರಾಯನು ಮೆಚ್ಚಿ ಸಂತೈಸಿದ. ಮತ್ತು ನಿನಗೆ "ಸ್ವಾಮಿದ್ರೋಹರ ಗಂಡ" ನೆಂದು ಕಾಲ

ಪೆಂಡೆಯ ತಾಳಿ ಚೌಕುಳಿಗಳೊಡನೆ ಕಂಠಮಾಲೆ ನವರತ್ನ ಭೂಷಣಾಂಬರಗಳನ್ನು ಕೊಟ್ಟು ರಾಯನು ಮೆಚ್ಚಿದ ವಜೀರನೇ – ॥ ೩೧ ॥

—ಗುರಿಕಾರಿ ನೀಲಕಂಠ ಸೋಮಲಿಂಗ ಗಂಗಾಧರನೆಂಬ ಆನೆ ಕುದುರೆಗಳನ್ನೂ ತಾಳಿ ಚೌಕುಳಿ ಕಂಠಮಾಲೆಗಳನ್ನೂ ಆನೆ ಕುದುರೆಗಳನ್ನೂ ಕೊಡಿಸಿ ಮನ್ನಿಸಿ ರಾಜರೆಲ್ಲರೂ ನಿನಗೆ ಸರಿಯಾರೆಂದು ವಜೀರನೆಂದು ಮೆಚ್ಚಿದರು. "ಅರಿರಾಯ ಭೇರುಂಡ" ನೆಂಬ ಕುದುರೆಯನ್ನೇರಿ ರಣಶೂರ ಹಮ್ಮೀರ ಕೆಂಪರಾಯನೆಂದು ಮೆರೆದ ವೀರನೇ– ॥ ೩೨ ॥

— ಒಂದು ಕಡೆ ಛತ್ರಿ ಚಾಮರಗಳು ಮತ್ತೊಂದು ಕಡೆ ಸಿಂಗರಿಸಿಕೊಂಡ ಪಾಠಕರು ಕಾಲಾಳುಗಳು ಆನೆ ಕುದುರೆಗಳು ವಾದ್ಯಗಳು ಮೊರೆಯುತ್ತಾ ಸೂರ್ಯ ಸನ್ನಿಭನಾಗಿ ನೀನು ಬರುತ್ತಿದ್ದೆ. ಆಗ ದಳವಾಯಿ ತಮ್ಮ ಧೀರನು ನಿನಗೆ ಶರಣೆಂದು ಬಲ್ಲಾಳಪುರದ ತನಕ ಬಾರೆಂದು ಹೇಳಿದ. ನೀನಲ್ಲವನನ್ನು ಎದಿರುಗೊಂಡೆ – ॥ ೩೩ ॥

— ಗುರಿಗುರಿಯಾದ ಪದಕಗಳು, ಚೌಕುಳಿ, ಪಟ್ಟಾವಳಿಗಳ ಉಡುಗೊರೆಯನ್ನು ತಂದು ದಳವಾಯಿಯು ನಿನಗೆ ಕೊಟ್ಟು ಮರೆಹೊಕ್ಕನು. ಅವನಿಗೆ ಅಭಯವಿತ್ತೆ. "ಕಾಕೊಳಲ" ಕೆರೆಯಲ್ಲಿ ಪಾಳ್ಯವಿಳಿದು ಅನೇಕ ರಾಜರಿಗೆ ಉಡುಗೊರೆ ಉಚಿತಗಳನ್ನು ಕೊಟ್ಟು ಜಾಣತನದಿಂದ ಕಳುಹಿಸಿ ಕಾಲಾಳುಗಳೊಡನೆ ಬಂದೆ – ॥ ೩೪ ॥

— ಬೆಂಗಳೂರು ಪಟ್ಟಣಕ್ಕೆ ಐರಾವತವೇರಿ ಬರುವ ದೇವೇಂದ್ರನಂತೆ, ದಿಗ್ವಿಜಯಮಾಡಿ ಬಂದೆ. ಊರನ್ನೆಲ್ಲಾ ಅಲಂಕರಿಸಿದ್ದರು. ಪರಿಜನರೂ, ಹೆಣ್ಣುಮಕ್ಕಳೂ ಮಂಗಳಾರತಿಯೆತ್ತಿ ಹರಸುತ್ತಿದ್ದಾಗಲೇ ನೀನು ಮನೆಗೆ ಹೊರಟೆ. ಕೆಂಪರಾಯನೇ ಪರಮೇಶ್ವರನ ಕರುಣದಿಂದ ಸಾಮ್ರಾಜ್ಯ ಪದವಿಯಲ್ಲಿ ಬಾಳು! – ॥ ೩೫ ॥

— ಅಮರಾವತಿಯಂತಹ ಅರಮನೆಯ ಸಡಗರವನ್ನೇನೆಂದು ಬಣ್ಣಿಸಲಾದೀತು. ಶುಭವಾದ ನವರತ್ನದಾರತಿಯನ್ನು ಹೆಣ್ಣುಮಕ್ಕಳು ಎತ್ತಿ ಹರಸುತ್ತಿದ್ದರು. ಇಮ್ಮಡಿ ಕೆಂಪರಾಯನೇ ಮಂಗಳಪೂರ್ವಕವಾಗಿ ಅರಮನೆಗೆ ಬಂದೆ. ನೀನು ಭಳಿರೇ! ಎನ್ನುವಂತೆ ಸ್ಥಿರವಾಗಿ ದೈವಪಟ್ಟದಲ್ಲಿ ಆಳು ॥ ೩೬ ॥

— ಯಲಹಂಕದ ರಾಜವಂಶೋದ್ಧಾರನೇ ಕಕೋದ್ಗಿರಿ ಗಂಗಾಧರನ ಭಕ್ತಮಂದಾರನೇ "**ಹಲಸೂರ ಸೋಮೇಶ್ವರ**"ನ ಬೆಂಗಳೂರ "ದೊಡ್ಡ ಬಸವೇಶ್ವರ"ನ ದಯದಿಂದ "ಗುರು ನಂಜೇಶ್ವರ"ನ ಕೃಪಾಪಾತ್ರನಾಗಿ, ಬಾಳು, "ಹಿರಿಯ ಕೆಂಪಭೂಪ-ಚನ್ನಾಂಬೆ"ಯರ ಮಗನೇ, ಸೂರ್ಯ ಚಂದ್ರರಿರುವವರೆಗೂ ನೀನು ವಿಭೀಷಣ ಪಟ್ಟವಾಳು! — ॥ ೩೭ ॥

— ಧನ, ಕನಕ, ಪುತ್ರ, ಪೌತ್ರಾದಿಗಳಿಂದ, ರಾಜ್ಯ, ಆನೆ, ಕುದುರೆಗಳಿಂದ, ಕನಕದಂಡಿಗೆ, ಪಲ್ಲಕ್ಕಿ, ಛತ್ರ, ಚಾಮರ, ಬೊಕ್ಕಸ, ಭಂಡಾರಗಳಿಂದ, ಧನಪತಿಯಂತೆ ನವನಿಧಾನಗಳಿಂದ, ಸೂರ್ಯನಂತೆ ರಾಜಸಗುಣದಿಂದ, ಶೈವಾಗಮ ತತ್ತ್ವವಿಚಾರಗಳಿಂದ, ಅಷ್ಟೈಶ್ವರ್ಯದಿಂದ, ಭೂಪತಿಯೇ ನೀನು ಸಾಮ್ರಾಜ್ಯಪದವಿಯಲ್ಲಿ ಬಾಳು! — ॥ ೩೮ ॥

— ಭೂಮಿ ಸೂರ್ಯ ನಕ್ಷತ್ರ ಚಂದ್ರ, ಇರುವ ವರೆಗೆ, ಮೇರು ಪರ್ವತ ಏಳು ಸಾಗರಗಳಿಗಿರುವ ವರೆಗೆ, ನವನಿಧಿ ಕನಕ-ರಜಿತಾದ್ರಿಗಳಿರುವ ವರೆಗೆ, ಸುರರು ದಿಕ್ಪಾಲರಿರುವವರೆಗೆ, ಶಾಶ್ವತವಾಗಿ ರಾಯರ ಸಿಂಹಾಸನವನ್ನು ಳಿಸಿದೆ. ಕೆಂಪ ದೊರೆಯೇ ನಿಮ್ಮ ಚರಿತ್ರೆಯನ್ನು ಬರೆದು ಓದಿ ಕೇಳುವವರಿಗೆ ಪರಮೇಶ್ವರನು ಕರುಣದಿಂದ ಇಹಪರ ಸುಖವನ್ನು ಕೊಡುವನು ಕೆಂಪದೊರೆ ರಾಯನೇ ಸಾಮ್ರಾಜ್ಯ ಪದವಿಯಲ್ಲಿ ಬಾಳು — ॥ ೩೯ ॥

ಎರಡನೆಯ ಭಾಗವು ಮುಗಿದುದು.

